# ತೇಜಸ್ವಿ ಅವರ ಕಥಾ ಸಾಹಿತ್ಯದಲ್ಲಿ ಪ್ರಕೃತಿ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ನಿಬಂಧ

ಸಂಶೋಧಕರು

**ಸರ್ವಮಂಗಳ.ಬಿ.ಕೆ.**

ಮಾರ್ಗದರ್ಶಕರು

**ಪ್ರೊ. ಹೆಚ್.ಎಲ್. ಮಹದೇವ**



ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದಿದೆ)




2008–09

# ತೇಜಸ್ವಿ ಅವರ ಕಥಾ ಸಾಹಿತ್ಯದಲ್ಲಿ ಪ್ರಕೃತಿ

ಕನ್ನಡ ಎಂ.ಫಿಲ್ ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ

ಸಾದರಪಡಿಸಿದ ನಿಬಂಧ

ಸಂಶೋಧಕರು

**ಸರ್ವಮಂಗಳ.ಬಿ.ಕೆ.**



ಮಾರ್ಗದರ್ಶಕರು

**ಪ್ರೊ. ಹೆಚ್.ಎಲ್. ಮಹದೇವ**



ಕರ್ನಾಟಕ ಸಂಘ (ರಿ), ಮಂಡ್ಯ

ಎಂ.ಎಲ್. ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ

(ಕನ್ನಡ ವಿಶ್ವ ವಿದ್ಯಾನಿಲಯದ ಮಾನ್ಯತೆ ಪಡೆದಿದೆ)

2008–09

# ಮಾರ್ಗದರ್ಶಕರ ಪ್ರಮಾಣ ಪತ್ರ

"ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಪ್ರಕೃತಿ" ಎಂಬ ಪ್ರಬಂಧವನ್ನು ಕನ್ನಡ ವಿಶ್ವವಿದ್ಯಾನಿಲಯದ ಎಂ.ಫಿಲ್.ಪದವಿಗಾಗಿ ಸರ್ವಮಂಗಳ ಬಿ.ಕೆ. ಅವರು ನನ್ನ ಮಾರ್ಗದರ್ಶನದಲ್ಲಿ ಸಿದ್ಧಪಡಿಸಿದ್ದಾರೆ. ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಈ ಮೊದಲು ಯಾವುದೇ ಪದವಿಗಾಗಿ ಸಲ್ಲಿಸಿರುವುದಿಲ್ಲವೆಂದು ದೃಢೀಕರಿಸುತ್ತೇನೆ.

ಸ್ಥಳ : ಮಂಡ್ಯ
**ದಿನಾಂಕ: 22-09-2009**

**(ಪ್ರೊ.ಹೆಚ್.ಎಲ್.ಮಹದೇವ )**
ಕನ್ನಡ ಪ್ರಾಧ್ಯಾಪಕರು,
ಸರ್ಕಾರಿ ಮಹಿಳಾ ಪದವಿ ಕಾಲೇಜು
ಮಂಡ್ಯ.

# ಸಂಶೋಧಕರ ಪ್ರಮಾಣ ಪತ್ರ

ಹಂಪಿಯ ಕನ್ನಡ ವಿಶ್ವವಿದ್ಯಾಲಯದ ಮಾನ್ಯತೆ ಪಡೆದಿರುವ ಮಂಡ್ಯದ ಕರ್ನಾಟಕ ಸಂಘವು ನಡೆಸುತ್ತಿರುವ ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರದಲ್ಲಿ 2008-2009ನೇ ಸಾಲಿಗೆ ಕನ್ನಡ ಎಂ.ಫಿಲ್ ಅಧ್ಯಯನದ ಅಭ್ಯರ್ಥಿಯಾಗಿ ನಾನು ಪ್ರವೇಶ ಪಡೆದಿರುತ್ತೇನೆ. ನನ್ನ ಎಂ.ಫಿಲ್.ಅಧ್ಯಯನದ ಅಂಗವಾಗಿ ಸಂಶೋಧನಾ ನಿಬಂಧ ರಚಿಸಲು **"ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಪ್ರಕೃತಿ"** ಎಂಬ ವಿಷಯವನ್ನು ಆಯ್ಕೆ ಮಾಡಿಕೊಂಡು ಪ್ರೊ.ಹೆಚ್.ಎಲ್. ಮಹದೇವ ಮಾರ್ಗದರ್ಶನದಲ್ಲಿ ಸಂಶೋಧನೆ ನಡೆಸಿ ಈ ನಿಬಂಧವನ್ನು ರಚಿಸಿರುತ್ತೇನೆ.

ಈ ನಿಬಂಧವನ್ನಾಗಲೀ, ನಿಬಂಧದ ಅಧ್ಯಾಯಗಳನ್ನಾಗಲೀ ಬೇರೆ ಯಾವುದೇ ಗ್ರಂಥ ಅಥವಾ ನಿಯತಕಾಲಿಕೆಗಳಲ್ಲಿ ಪ್ರಕಟಿಸಿರುವುದಿಲ್ಲ. ಕನ್ನಡ ವಿಶ್ವವಿದ್ಯಾಲಯಕ್ಕೆ ಎಂ.ಫಿಲ್.ಪದವಿಗಾಗಿ ಈ ನಿಬಂಧವನ್ನು ಸಲ್ಲಿಸುತ್ತಿದ್ದೇನೆ.

Sarvamangala B.K.

ಸ್ಥಳ : ಮಂಡ್ಯ
ದಿನಾಂಕ:22-09-2009

**(ಸರ್ವಮಂಗಳ.ಬಿ.ಕೆ.)**
ಸಂಶೋಧನಾ ವಿದ್ಯಾರ್ಥಿ
ಕರ್ನಾಟಕ ಸಂಘ (ರಿ), ಮಂಡ್ಯ
ಎಂ.ಎಲ್.ಶ್ರೀಕಂಠೇಶಗೌಡ ಸಂಶೋಧನಾ ಕೇಂದ್ರ
ಕನ್ನಡ ವಿ.ವಿ.ಹಂಪಿ ಮಾನ್ಯತೆ ಪಡೆದಿದೆ

# ಪರಿವಿಡಿ

# ಪ್ರಸ್ತಾವನೆ

ಸ್ವಾತಂತ್ರ್ಯಾನಂತರದ ಕನ್ನಡ ಸಾಹಿತ್ಯವು ಬಹು ಆಯಾಮಗಳಲ್ಲಿ ತನ್ನ ಸಮೃದ್ಧಿಯನ್ನು ದಾಖಲಿಸಿದೆ. ಈ ಸಮೃದ್ಧಿಯ ಅಧ್ಯಯನ, ವಿಶ್ಲೇಷಣೆಗಳು ಮತ್ತು ಅವುಗಳ ವಿಮರ್ಶೆ, ಮೌಲ್ಯಮಾಪನ ಕಾರ್ಯಗಳು ಇಂದಿಗೂ ಅಪೂರ್ಣ. ಸಾಹಿತ್ಯ, ಸಂಸ್ಕೃತಿ ಮತ್ತು ಶೈಕ್ಷಣಿಕ ಉದ್ದೇಶಗಳಿಗಾಗಿ ಇಂತಹ ಕಾರ್ಯಗಳು ಅಲ್ಲಲ್ಲಿ ಘಟಿಸುತ್ತಿರುತ್ತವೆ. ಈ ಅರ್ಥದಲ್ಲಿಯೇ **"ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಪ್ರಕೃತಿ"** ಎಂಬ ನನ್ನ ನಿಬಂಧದ ವಿಷಯಕ್ಕೂ ಒಂದು ಶೈಕ್ಷಣಿಕ ಮಿತಿ ತಾನಾಗಿಯೇ ನಿರ್ಮಾಣಗೊಳ್ಳುವುದು.

ಆಧುನಿಕ ಕನ್ನಡದ ಸೃಜನಶೀಲ ಲೇಖಕರ ಗುಂಪಿನಲ್ಲಿ 'ವಿಸ್ಮಯ' ಎನಿಸುವಷ್ಟು ಸಾಧನೆ ಮಾಡಿರುವ ತೇಜಸ್ವಿಯವರು ಬಹು ಆಯಾಮಗಳುಳ್ಳ ಶ್ರೇಷ್ಠ ಗದ್ಯ ಲೇಖಕ, ಲೋಹಿಯಾರ ತಾತ್ವಿಕತೆ, ಕುವೆಂಪುರವರ ಕಲಾಸೃಷ್ಟಿ, ಕಾರಂತರ ಪ್ರಯೋಗಶೀಲತೆಗಳು ಮೈವೆತ್ತಂತೆ ಕಾಣುತ್ತಿರುವ ತೇಜಸ್ವಿಯವರು ಭಾರತೀಯ ಸಮಾಜದ ರಾಜಕೀಯ ಆರ್ಥಿಕಚಿಂತನೆ, ವೈಚಾರಿಕತೆ, ಸಾಮಾಜಿಕ ಅನ್ಯಾಯ ಮುಖ್ಯವಾಗಿ ನಿಸರ್ಗ ಮತ್ತು ಮಾನವರ ಸಂಬಂಧಗಳನ್ನು ಕುರಿತಂತೆ ತುಂಬಾ ವೈಜ್ಞಾನಿಕವಾಗಿ ಆಲೋಚಿಸಿದ್ದಾರೆ. ಆ ಆಲೋಚನೆಗೆಳೆಲ್ಲವೂ ವಿವಿಧ ಕಥನಗಳ ರೂಪದಲ್ಲಿ ಕಲೆಯ ಎತ್ತರವನ್ನು ಮುಟ್ಟಿರುವುದು ಕನ್ನಡ ಸಾಹಿತ್ಯ ಮತ್ತು ಸಂಸ್ಕೃತಿಗಳಿಗೆ ಸಿಕ್ಕಿದ ಹೊಸ ಆಯಾಮವೆಂದೇ ಭಾವಿಸಬೇಕಾಗುತ್ತದೆ.

ಸಾಮಾನ್ಯವಾಗಿ ಮಾನವ ಇತಿಹಾಸದಲ್ಲಿ ಮನುಷ್ಯ ಕೇಂದ್ರಿತ ಆಲೋಚನೆಗಳೇ ಹೆಚ್ಚು. ಅಲ್ಲೆಲ್ಲಾ ಸಮಾಜ ಮತ್ತು ನಿಸರ್ಗಗಳನ್ನು ಮನುಷ್ಯನಿಗೆ ಪೂರಕವಾಗಿ ವರ್ಣಿಸಲಾಗಿದೆ. ವೈಜ್ಞಾನಿಕತೆ ಹೆಚ್ಚಿದಂತೆಲ್ಲಾ ಆ 'ಪೂರ್ವದೃಷ್ಟಿಕೋನ'ವು ಕ್ಷೀಣಿಸಿ, ವಸ್ತುನಿಷ್ಠತೆಗೆ ಸಮಷ್ಟಿ ಪ್ರಜ್ಞೆಗೆ ಆದ್ಯತೆ ಸಿಕ್ಕಿರುವುದನ್ನು ಕಾಣುತ್ತೇವೆ. ಈಗಿನ ಜಾಗತೀಕರಣವು ವಾಸ್ತವವಾಗಿ ವಿಶ್ವಾತ್ಮಕತೆಯ ಹೆಸರಿನಲ್ಲಿ ಮನುಷ್ಯನ ಖಾಸಗೀ ಸಂಸ್ಕೃತಿಯನ್ನು ಉದಾತ್ತೀಕರಿಸುವ ವ್ಯಕ್ತಿನಿಷ್ಠ ಪ್ರಗತಿಯತ್ತ ಧಾವಂತದಿಂದ ಸಾಗುತ್ತಿದೆ. ಈ ಧಾವಂತವು ಮನುಷ್ಯ ಕೇಂದ್ರಿತವಾಗಿ ವಿಧ್ವಂಸಕ ಸ್ವರೂಪ ಪಡೆಯುವ ಮುನ್ನ ನಿಸರ್ಗ ಮತ್ತು ಮನುಷ್ಯರ ನಡುವೆ ಸಮತೋಲನ ಸಾಧಿಸಬೇಕಾದ ಅನಿವಾರ್ಯತೆ ಇದೆ.

ಆಶ್ಚರ್ಯವೆಂದರೆ, ತೇಜಸ್ವಿಯವರು ವಿಕಾಸತತ್ವದ ಚೌಕಟ್ಟಿನಲ್ಲಿ ನಿಸರ್ಗ ಮತ್ತು ಮಾನವ ಬದುಕಿನ ಸಾವಯವ ಸಂಬಂಧಗಳನ್ನು ನಿರೂಪಿಸುವುದರ ಮೂಲಕ ಅಲ್ಲಿ

ಇರಬೇಕಾದ ಸಮತೋಲನದ ಅತ್ಯುನ್ನತ ದರ್ಶನ ಮಾಡಿಸಿದ್ದಾರೆ. ತೇಜಸ್ವಿಯವರ ಸಮಗ್ರ ಬರವಣಿಗೆಯ ಹಿಂದಿರುವ ಒಳನೋಟವೆಂದರೆ: ನೈಸರ್ಗಿಕ ವಿಕಾಸದಷ್ಟೇ ಸಾಮಾಜಿಕ ವಿಕಾಸವೂ ಮನುಷ್ಯರ ಔನ್ನತ್ಯಕ್ಕೆ ಕಾರಣವಾಗಬೇಕು. ಈ ಚಿರಸತ್ಯವೇ ನನ್ನ ನಿಬಂಧದ ವಿಷಯ **"ತೇಜಸ್ವಿ ಅವರ ಕಥಾ ಸಾಹಿತ್ಯದಲ್ಲಿ ಪ್ರಕೃತಿ"** ಯ ಆಯ್ಕೆಗೆ ಪ್ರೇರಣೆ ನೀಡಿದೆ. ತೇಜಸ್ವಿಯವರ ಬರವಣಿಗೆಯ ಆಳ-ವಿಸ್ತಾರಗಳನ್ನು ಗ್ರಹಿಸುವುದು, ವಿಶ್ಲೇಷಿಸುವುದು ಅರ್ಥೈಸಿಕೊಳ್ಳುವುದು ಒಂದು ವಿಸ್ಮಯಕಾರಿ ಅನುಭವವೇ ಸರಿ.

ಈ ಹಿನ್ನಲೆಯಲ್ಲಿ ಪ್ರಸ್ತುತ ನಿಬಂಧದ ಮೊದಲ ಅಧ್ಯಾಯವು ಪ್ರಧಾನವಾಗಿ ತೇಜಸ್ವಿಯವರ ಕಥಾಸಾಹಿತ್ಯವನ್ನು ಅಧ್ಯಯನಕ್ಕೆ ಆರಿಸಿಕೊಂಡ ಸಂಗತಿಯನ್ನು ಲೇಖಕರ ಸಾಧನೆ. ವಿಶಿಷ್ಟತೆಗಳ ಕಿರುಪರಿಚಯಗಳೊಡನೆ ಪ್ರಾರಂಬಿಸಿ, ಅವರ ಕಥಾಸಾಹಿತ್ಯದಲ್ಲಿ ಪ್ರಕೃತಿಯ ಪಾತ್ರ, ಅದರ ಅಗ್ರಸ್ಥಾನಮಾನಗಳ ಒಳನೋಟಗಳನ್ನು ನೀಡಿ ಅಧ್ಯಯನದ ಉದ್ದೇಶವನ್ನು ಸ್ಪಷ್ಟಪಡಿಸಲಿದೆ. ಎರಡನೇ ಅಧ್ಯಾಯದಲ್ಲಿ ತೇಜಸ್ವಿಯವರ ಕಥಾಸಾಹಿತ್ಯದ ವಸ್ತು ವಿಷಯಗಳನ್ನು ಸ್ಥೂಲವಾಗಿ ವಿವರಿಸಿ, ಅಧ್ಯಯನ ವ್ಯಾಪ್ತಿಯ ಮಹತ್ವವನ್ನು ಪರಿಚಯಿಸಲಾಗುವುದು. ಮೂರನೇ ಅಧ್ಯಾಯದಲ್ಲಿ ತೇಜಸ್ವಿಯವರ ಕಥಾಸಾಹಿತ್ಯದ ಆಶಯಗಳ ಸಮಗ್ರನೋಟ ಒದಗಿಸಲು ಪ್ರಯತ್ನ ಮಾಡಲಾಗಿದೆ. ನಾಲ್ಕನೇ ಅಧ್ಯಾಯದಲ್ಲಿ ತೇಜಸ್ವಿಯವರ ಸಮಗ್ರ ಸಾಹಿತ್ಯದ ಹಿನ್ನೆಲೆಯಲ್ಲಿ ಪ್ರಕೃತಿಯ ಪಾತ್ರದ ಸ್ಥಾನಮಾನಗಳ ಚರ್ಚೆ ನಡೆಸಲಾಗುತ್ತದೆ.

ಒಟ್ಟಾರೆ ಮೇಲ್ಕಂಡ ಅಧ್ಯಾಯಗಳಲ್ಲಿ ಮಾನವ ಮತ್ತು ಪ್ರಕೃತಿಯ ಅನಿವಾರ್ಯ ಸಂಬಂಧಗಳ ಸ್ಥೂಲ ಅವಲೋಕನ ಮಾತ್ರ ಸಾಧ್ಯವಾಗಿದ್ದು, ಅದರ ವಿಸ್ತೃತ ವಿಶ್ಲೇಷಣೆಯು ಐದನೆಯ ಅಧ್ಯಾಯದಲ್ಲಿ ಸಾಗುತ್ತದೆ. ಮುಖ್ಯವಾಗಿ 'ಪ್ರಕೃತಿಯ ಸಾರ್ಥಕತೆ' ಯನ್ನು ಹಲವು ನಿಟ್ಟಿನಲ್ಲಿ ವಿವರಿಸಲಾಗುವುದು. ಅವುಗಳೆಂದರೆ: ಅ) ಪ್ರಕೃತಿ ಮತ್ತು ಮಾನವ, ಆ) ಪ್ರಕೃತಿ ಮತ್ತು ಸಮಾಜ, ಇ) ಪ್ರಕೃತಿ ಮತ್ತು ವೈಚಾರಿಕತೆ, ಈ) ಪ್ರಕೃತಿ ಮತ್ತು ಆರ್ಥಿಕತೆ ಉ) ಪ್ರಕೃತಿ ಮತ್ತು ಧರ್ಮ ಊ) ಪ್ರಕೃತಿ ಮತ್ತು ವಿಜ್ಞಾನ ಋ) ಪ್ರಕೃತಿ ಮತ್ತು ರಾಜಕೀಯ ಎ) ಪ್ರಕೃತಿ ಮತ್ತು ಸೌಂದರ್ಯ ಏ) ಪ್ರಕೃತಿ ಮತ್ತು ತತ್ವಶಾಸ್ತ್ರ ಐ) ಪ್ರಕೃತಿ ಮತ್ತು ಸಂಸ್ಕೃತಿ ಇತ್ಯಾದಿ ಪ್ರಧಾನ ನೆಲೆಗಳು ಇಲ್ಲಿ ವಿಶ್ಲೇಷಣೆಗೆ ಒಳಪಡುತ್ತವೆ.

ಆರನೆಯ ಅಧ್ಯಾಯವು ತೇಜಸ್ವಿಯವರ ಕಥಾಸಾಹಿತ್ಯಕ್ಕೆ ಪ್ರಕೃತಿಯ ಸಾಹಚರ್ಯ ದಿಂದ ಒದಗಿ ಬಂದಿರುವ ವೈಶಿಷ್ಟತೆಯನ್ನು ಅವರ ಸಮಕಾಲೀನ, ಹಿರಿಯ ಲೇಖಕರ

ಸಾಧನೆಗಳೊಡನೆ ತೌಲನಿಕವಾಗಿ ವಿವರಿಸುತ್ತದೆ ಆ ಮೂಲಕ ತೇಜಸ್ವಿ ಅವರ ಕಥಾಸಾಹಿತ್ಯದಿಂದ ಕನ್ನಡ ಸಾಹಿತ್ಯವು ಪಡೆದಿರುವ 'ವಿಶಿಷ್ಟ ಅನನ್ಯತೆ' ಯನ್ನು ಮನಗಾಣಿಸಿ ಅಧ್ಯಯನದ ಸಾರ್ಥಕತೆಯನ್ನು ಸ್ಪಷ್ಟ ಪಡಿಸಲು ಪ್ರಯತ್ನಿಸಲಾಗಿದೆ.

ಉಪಸಂಹಾರ ಭಾಗದಲ್ಲಿ ತೇಜಸ್ವಿಯವರ ಕಥಾಸಾಹಿತ್ಯದ ಅಧ್ಯಯನ ವಿಶೇಷತೆಯನ್ನು ಯಾವ ದೃಷ್ಟಿಕೋನಗಳಿಂದ ಮತ್ತು ಹೇಗೆ ಗ್ರಹಿಸಲಾಗಿದೆ ಎಂಬ ವಿಚಾರವನ್ನು ಕ್ರೋಢೀಕರಿಸಿ, ಅಧ್ಯಯನ ಕಾರ್ಯದ ಮಹತ್ವವನ್ನು ಸ್ಪಷ್ಟಪಡಿಸಿರುತ್ತೇನೆ.

******

# ಅಧ್ಯಾಯ-1

## ಅಧ್ಯಯನದ ಉದ್ದೇಶ ಮತ್ತು ವ್ಯಾಪ್ತಿ

ನವ್ಯದ ಉತ್ಕರ್ಷ ಕಾಲದಲ್ಲಿ ಕಥೆಗಾರರಾಗಿ ಸಾಹಿತ್ಯ ಕ್ಷೇತ್ರ ಪ್ರವೇಶಿಸಿದ ತೇಜಸ್ವಿಯವರು ಮುಂದೆ ಕಾವ್ಯ, ನಾಟಕ, ಕಾದಂಬರಿ, ಪ್ರವಾಸ ಕಥನ, ವೈಜ್ಞಾನಿಕ ಲೇಖನಗಳು, ಪರಿಸರದ ಕತೆಗಳು, ಅನುವಾದ, ಅಂಕಣ ಬರಹಗಳಂತಹ ಹಲವು ಪ್ರಕಾರಗಳಲ್ಲಿ ಸಾರ್ವಕಾಲಿಕ ಮೌಲ್ಯದ ಶ್ರೇಷ್ಠ ಕೃತಿಗಳನ್ನು ರಚಿಸಿದ್ದಾರೆ. ಲೋಹಿಯಾರವರ ತಾತ್ವಿಕತೆ, ಕುವೆಂಪುರವರ ಕಲಾದೃಷ್ಟಿ, ಕಾರಂತರ ತಾರ್ಕಿಕತೆಗಳೇ ಮೈವೆತ್ತಂತಿರುವ ತೇಜಸ್ವಿಯವರು ಆಧುನಿಕ ಕನ್ನಡ ಸಾಹಿತ್ಯದ ವಿವಿಧ ಕಾಲಘಟ್ಟಗಳ ದೃಷ್ಟಿ, ಧೋರಣೆ, ಪಂಥಗಳ ಪ್ರಭಾವ, ಪ್ರೇರಣೆಗಳಿಂದ ಬಿಡಿಸಿಕೊಂಡು ತಮ್ಮದೇ ಆದ ಸ್ವತಂತ್ರ ಮಾರ್ಗ ಸೃಷ್ಟಿಸಿದ ಕನ್ನಡದ ಶ್ರೇಷ್ಠ ಸೃಜನಶೀಲ ಬರಹಗಾರರಲ್ಲಿ ಒಬ್ಬರು. ಅವರ ಸೃಜನಶೀಲನತೆಯ ವೈಶಿಷ್ಟ್ಯತೆ ಇರುವುದು ಮಾನವ, ನಿಸರ್ಗ ಮತ್ತು ಸಮಾಜಗಳ ನಡುವೆ ಸಾಧಿಸಿರುವ ಸಮತೋಲನ ದೃಷ್ಟಿಯಲ್ಲಿ, ಅವರ ಬರಹಗಳಲ್ಲಿ ಕಂಡುಬರುವ ಲೇಖಕ ಪ್ರತಿಭೆ, ಅವರ ಅನನ್ಯತೆಗಳು ಕನ್ನಡ ಸಾಹಿತ್ಯಕ್ಕೆ ಚಿರನಾವೀನ್ಯತೆಯನ್ನು ತಂದುಕೊಡುವಲ್ಲಿ ಯಶಸ್ವಿಯಾಗಿವೆ.

ತೇಜಸ್ವಿ ಅವರದು ಬಹುಮುಖೀ ಪ್ರತಿಭೆ, ಕನ್ನಡದಲ್ಲಿ ಸ್ನಾತಕೋತ್ತರ ಪದವಿ ಪಡೆದಿದ್ದರೂ, ನೌಕರಿ ಹುಡುಕದೆ, ನಗರ ಜೀವನವನ್ನು ತಿರಸ್ಕರಿಸಿ, ಮಲೆನಾಡಿನ ಸಹಜ ಬದುಕನ್ನು ಒಪ್ಪಿಕೊಂಡು ಅಲ್ಲಿಯೇ ನೆಲೆಸಿ, ಕೃಷಿ, ಛಾಯಾಗ್ರಾಹಣ, ಪರಿಸರ ಕಾಳಜಿ, ವೈಜ್ಞಾನಿಕ ಅಧ್ಯಯನ, ವಿಚಾರ ಮತ್ತು ಹೋರಾಟ ಇಂತಹ ಹಲವಾರು ಚಟುವಟಿಕೆಗಳಲ್ಲಿ ಸಮಾನ ಆಸಕ್ತಿ ಇಟ್ಟುಕೊಂಡು, ಆ ಎಲ್ಲದರಲ್ಲಿ ಸಾರ್ಥಕವಾದ ಕಾರ್ಯ ಸಾಧಿಸುವುದು ಸುಲಭದ ವಿಚಾರವಲ್ಲ. ಅದಕ್ಕೆ ತೇಜಸ್ವಿಯವರೇ ನಿದರ್ಶನ. ಈ ದೃಷ್ಟಿಯಿಂದ ಕನ್ನಡಕ್ಕೊಬ್ಬರೇ ತೇಜಸ್ವಿ ಎಂದರೆ ಉತ್ಪ್ರೇಕ್ಷೆಯ ಮಾತಾಗಲಾರದು.

ಕೆ.ಪಿ.ಪೂರ್ಣಚಂದ್ರ ತೇಜಸ್ವಿ ಅವರು 1938ರ ಸೆಪ್ಟೆಂಬರ್ 8 ರಂದು ಶಿವಮೊಗ್ಗ ಜಿಲ್ಲೆಯ ತೀರ್ಥಹಳ್ಳಿ ತಾಲ್ಲೂಕಿನ ಕುಪ್ಪಳ್ಳಿ ಗ್ರಾಮದಲ್ಲಿ ಜನಿಸಿದರು. ತಂದೆ ಹೆಸರಾಂತ ಕನ್ನಡದ ಮೇರು ಲೇಖಕ – ಕುವೆಂಪು, ತಾಯಿ – ಹೇಮಾವತಿಯವರು. ತಂದೆ ಕುವೆಂಪು ಅವರು ಮಲೆನಾಡಿನಿಂದ ಮೈಸೂರಿಗೆ ಬಂದು ಸಾಹಿತ್ಯಕೃಷಿ ಮಾಡಿದರೆ, ತೇಜಸ್ವಿ ನಗರ ಜೀವನವನ್ನು ಬಿಟ್ಟು ಮಲೆನಾಡಿಗೆ ಹಿಂತಿರುಗಿ, ಕೃಷಿ ಕಾಯಕದ ಜೊತೆಗೆ

ಸಾಹಿತ್ಯ ಕೃಷಿಯನ್ನು ಯಶಸ್ವಿಯಾಗಿ ನಡೆಸಿದವರು. ತಮ್ಮ ಸಮಕಾಲೀನ ಗದ್ಯಲೇಖಕರ ನಡುವೆ ವಿಶಿಷ್ಟರಾಗಿ ಕಾಣುವ ತೇಜಸ್ವಿ ಯವರು ತಮ್ಮ ಕೃತಿಗಳಲ್ಲಿ ನಿರೂಪಿಸಿರುವ ವಸ್ತು ವಿಷಯಗಳ ವೈವಿಧ್ಯತೆ, ತೀಕ್ಷ್ಣವಾದ ವೈಚಾರಿಕತೆ, ವೈಜ್ಞಾನಿಕ ದೃಷ್ಟಿಕೋನ, ವಿಡಂಬನೆ, ಹಾಸ್ಯ, ಪ್ರಕೃತಿಯ ಚಿತ್ರಣಗಳಿಂದ ಕನ್ನಡಿಗರ "ವೈಚಾರಿಕ ಪ್ರಜ್ಞೆಗೆ" ಹೊಸತನ ಮೂಡಿಸಿದ್ದಾರೆ.

ಇಂತಹ ಶ್ರೇಷ್ಠ ಲೇಖಕರ ಕೃತಿಗಳು ಮತ್ತು ಲೇಖನಗಳು ಹಲವಾರು. ಅವುಗಳಲ್ಲಿ: ಹುಲಿಯೂರಿನ ಸರಹದ್ದು, (1962), ' ಬೃಹನ್ನಳೆ ಮತ್ತು ಸೋಮುವಿನ ಸ್ವಗತ ಲಹರಿ' (ಕವನ ಸಂಕಲನ 1962), 'ಯಮಳ ಪ್ರಶ್ನೆ' (ನಾಟಕ 1964), 'ವ್ಯಕ್ತಿ ವಿಶಿಷ್ಟ ಸಿದ್ಧಾಂತ' (1964), 'ಸ್ವರೂಪ', (ಕಿರುಕಾದಂಬರಿ 1966), 'ಅಬಚೂರಿನ ಪೋಸ್ಟಾಫೀಸು' (1973), 'ಕರ್ವಾಲೋ' (1975), 'ನಿಗೂಢ ಮನುಷ್ಯರು' (1976), 'ಚಿದಂಬರ ರಹಸ್ಯ' (1985), 'ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್' (ಪ್ರವಾಸಕಥನ 1990), 'ಪರಿಸರದ ಕತೆ' (1991), 'ಕಿರಗೂರಿನ ಗಯ್ಯಾಳಿಗಳು' (1991), 'ಸಹಜಕೃಷಿ' ಒಂದು ಪರಿಚಯ (1992), 'ಮಿಸ್ಸಿಂಗ್ ಲಿಂಕ್' (1992) 'ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು' (1993), 'ಫ್ಲೆಯಿಂಗ್ ಸಾಸರ್ಸ್ ಭಾಗ-1, ಭಾಗ-2 (1993), ವಿಸ್ಮಯ ಭಾಗ-1, ಭಾಗ-2 (1993), 'ಕಾಡಿನ ಕಥೆಗಳು' ಭಾಗ-1, ಭಾಗ-2 (1993), 'ಕಾಡಿನ ಕಥೆಗಳು ಭಾಗ-3 (1994), 'ಜುಗಾರಿಕ್ರಾಸ್' (1994), ರುದ್ರ ಪ್ರಯಾಗದ ಭಯಾನಕ ನರಭಕ್ಷಕ (1995), 'ಕನ್ನಡನಾಡಿನ ಹಕ್ಕಿಗಳು' (ಮಿಂಚುಳ್ಳಿ) ಭಾಗ-1, (1994), 'ಕನ್ನಡನಾಡಿನ ಹಕ್ಕಿಗಳು' (ಹೆಜ್ಜೆ ಮೂಡದ ಹಾದಿ 1996), ಅಣ್ಣನ ನೆನಪು' (1996), 'ಹಕ್ಕಿಪುಕ್ಕ' (1997), 'ಪಾಕಕ್ರಾಂತಿ ಮತ್ತು ಇತರ ಕಥೆಗಳು' (1998), 'ಮಾಯಾಲೋಕ' (2006) – ಮುಖ್ಯವಾದವುಗಳು.

ತೇಜಸ್ವಿಯವರು ಪ್ರಶಸ್ತಿಗಳ ಬೆನ್ನು ಹತ್ತಿದವರಲ್ಲ. ಆದರೆ ಪ್ರಶಸ್ತಿಗಳೇ ಅವರನ್ನು ಹುಡುಕಿಕೊಂಡು ಬಂದಿವೆ. 'ಕರ್ವಾಲೊ' ಕಾದಂಬರಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ (1981), 'ಚಿದಂಬರ ರಹಸ್ಯ'ಕ್ಕೆ 1985ರ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1987ರಲ್ಲಿ ' ಚಿದಂಬರ ರಹಸ್ಯ' ಕೃತಿಗಾಗಿ ಕೇಂದ್ರ ಸರ್ಕಾರ ಅಕಾಡೆಮಿ ಪ್ರಶಸ್ತಿ, 1989 ರಲ್ಲಿ 'ಚಿದಂಬರ ರಹಸ್ಯ' ಕೃತಿಗಾಗಿ ಭಾರತೀಯ ಭಾಷಾ ಪರಿಷತ್ ಪ್ರಶಸ್ತಿ, 1991ರಲ್ಲಿ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 'ಅಲೆಮಾರಿ ಅಂಡಮಾನ್ ಮತ್ತು ಮಹಾನದಿ ನೈಲ್'ಗೆ 1992ರಲ್ಲಿ, 'ಕಿರಗೂರಿನ ಗಯ್ಯಾಳಿಗಳು' ಗೆ ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ, 1993ರಲ್ಲಿ ಪರಿಸರ ಪ್ರಶಸ್ತಿ, ರಾಜ್ಯ ಪರಿಸರ ಇಲಾಖೆಯಿಂದ 'ಮಿಸ್ಸಿಂಗ್ ಲಿಂಕ್' ಕೃತಿಗೆ 1994ರಲ್ಲಿ

ಶಿವರಾಮ ಕಾರಂತ ಪ್ರಶಸ್ತಿ, ರಾಜ್ಯ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994ರಲ್ಲಿ 'ಮಿಸ್ಸಿಂಗ್ ಲಿಂಕ್' ಕೃತಿಗೆ, 'ಕಾಡಿನ ಕಥೆಗಳು' ಭಾಗ-2ಕ್ಕೆ ಕರ್ನಾಟಕ ಸಾಹಿತ್ಯ ಅಕಾಡೆಮಿ ಪ್ರಶಸ್ತಿ 1994ರಲ್ಲಿ, 1995ರಲ್ಲಿ ವಿಜ್ಞಾನ ಸಾಹಿತ್ಯದ ವಿಶಿಷ್ಟ ಕೃತಿ 'ವಿಸ್ಮಯ' ಭಾಗ-1, 'ವಿಸ್ಮಯ' ಭಾಗ-2 ಕೃತಿಗೆ ರಾಜ್ಯ ಸಾಹಿತ್ಯ ಅಕಾಡೆಮಿ ಬಹುಮಾನ, 2001ರಲ್ಲಿ ಕರ್ನಾಟಕ ರಾಜ್ಯದ ಪಂಪಪ್ರಶಸ್ತಿ, ಈ ಸಾಹಿತ್ಯಿಕ ಪ್ರಶಸ್ತಿಗಳಲ್ಲದೇ ಅವರ ಕಥೆಗಳನ್ನು ಆಧರಿಸಿದ ಚಲನಚಿತ್ರಗಳು ರಾಷ್ಟ್ರೀಯ ಪ್ರಶಸ್ತಿಗಳನ್ನು ಗಳಿಸುವಲ್ಲಿ ಯಶಸ್ವಿಯಾಗಿವೆ. 1973ರಲ್ಲಿ 'ಅಬಚೂರಿನ ಪೋಸ್ಟಾಫೀಸು' ಚಲನಚಿತ್ರಕ್ಕೆ ಅತ್ಯುತ್ತಮ ಪ್ರಾದೇಶಿಕ ಚಲನಚಿತ್ರ ಪ್ರಶಸ್ತಿ, 'ತಬರನಕಥೆ' ಆಧಾರಿತ ಚಲನಚಿತ್ರಕ್ಕೆ 'ಸ್ವರ್ಣಕಮಲ ಪ್ರಶಸ್ತಿ' (1989-90), 'ಕುಬಿ ಮತ್ತು ಇಯಾಲ' ಕಥೆಯಾಧಾರಿತ ಚಲನಚಿತ್ರಕ್ಕೆ ಅತ್ಯುತ್ತಮ ಕಥಾಲೇಖಕ, ಸ್ವರ್ಣಕಮಲ ಪ್ರಶಸ್ತಿ (1990) ರಲ್ಲಿ ಪಡೆದಿದ್ದಾರೆ.

ತೇಜಸ್ವಿಯವರ ಕಥಾಸಾಹಿತ್ಯ ತಮಿಳು, ಹಿಂದಿ, ಇಂಗ್ಲಿಷ್, ಫ್ರೆಂಚ್ ಭಾಷೆಗಳಿಗೆ ಅನುವಾದಗೊಂಡಿವೆ ಎಂಬುದು ಹೆಮ್ಮೆಪಡುವ ವಿಚಾರ. ಇವರ 'ಅಬಚೂರಿನ ಪೋಸ್ಟಾಫೀಸು' ಕಥಾಸಂಕಲನವು ಮರಾಠಿ, ಹಿಂದಿ, ಮಲೆಯಾಳಂ ಮತ್ತು ಇಂಗ್ಲಿಷ್ ಭಾಷೆಗಳಿಗೂ, 'ನಿಗೂಢ ಮನುಷ್ಯರು' ಎಂಬ ಕಿರು ಕಾದಂಬರಿಯು ಇಂಗ್ಲಿಷ್‌ಗೂ, 'ಕರ್ವಾಲೊ' ಕಾದಂಬರಿ ಇಂಗ್ಲಿಷ್ ಮತ್ತು ಜಪಾನ್ ಭಾಷೆಗಳಿಗೂ, 'ಚಿದಂಬರ ರಹಸ್ಯ' ತಮಿಳು, ಮರಾಠಿ ಭಾಷೆಗಳಿಗೂ, 'ಕಿರಗೂರಿನ ಗಯ್ಯಾಳಿಗಳು' ಮಲೆಯಾಳಂ, ಹಿಂದಿ, ಇಂಗ್ಲಿಷ್, ಭಾಷೆಗಳಿಗೆ ಭಾಷಾಂತರಗೊಂಡಿವೆ.

'ತಬರನಕಥೆ', 'ಕಿರಗೂರಿನ ಗಯ್ಯಾಳಿಗಳು', 'ಕೃಷ್ಣೇಗೌಡನ ಆನೆ', ಕಥೆಗಳು ನಾಟಕಗಳಾಗಿ ರೂಪಾಂತರಗೊಂಡು ರಂಗಪ್ರಯೋಗ ಕಂಡಿವೆ. ಜ್ಞಾನಪೀಠ ಪ್ರಶಸ್ತಿ ಪುರಸ್ಕೃತ ಗಿರೀಶ್ ಕಾರ್ನಾಡ್, ಕೆ.ವಿ.ಸುಬ್ಬಣ್ಣ, ಟಿ.ಎಸ್.ನಾಗಾಭರಣ, ಗಿರೀಶ್ ಕಾಸರವಳ್ಳಿ, ಟಿ.ಎಸ್.ನರಸಿಂಹನ್‌ರಂತಹ ಹೆಸರಾಂತ ನಿರ್ದೇಶಕರು ತೇಜಸ್ವಿಯವರ ನಾಟಕಗಳನ್ನು ನಿರ್ದೇಶಿಸಿದ್ದಾರೆ.

ತೇಜಸ್ವಿ ಅವರ ಕಥಾಲೋಕದ ಅನೇಕ ವಿಸ್ಮಯಗಳಂತೆಯೇ ಅವರ ಸಾಧನೆಯೂ ಬರಹಗಳ ರೂಪದಲ್ಲಿ ನಮ್ಮ ಕಣ್ಣ ಮುಂದಿದೆ. ಇಂತಹ ಬಹುಮುಖೀ ಪ್ರತಿಭೆಯ ತೇಜಸ್ವಿಯವರ ಕಥಾಸಾಹಿತ್ಯದ ಅಂತ:ಸತ್ವದ ಬಗೆಗೆ ಹಲವಾರು ಪ್ರಸಿದ್ಧ ವಿಮರ್ಶಕರು ತಮ್ಮ ಉತ್ತಮ ವಿಶ್ಲೇಷಣೆ ಮತ್ತು ವಿಮರ್ಶೆಗಳ ಮುಖಾಂತರ ಮೌಲಿಕ ಚರ್ಚೆ ನಡೆಸಿದ್ದಾರೆ.

ತೇಜಸ್ವಿಯವರು ಆಧುನಿಕ ಸಾಹಿತ್ಯದ ಬೇರೆ ಬೇರೆ ಪ್ರಕಾರಗಳಲ್ಲಿ ಕೃತಿ ರಚಿಸಿದ್ದರೂ ಅವರ ಒಟ್ಟು ಬರವಣಿಗೆಯಲ್ಲಿ ಕಥಾಸಾಹಿತ್ಯವು ವಿಶಿಷ್ಟವಾಗಿ ಗಮನ ಸೆಳೆಯುತ್ತದೆ. ತಮ್ಮ ಸಮಕಾಲೀನ ಲೇಖಕರಿಗಿಂತ ತೇಜಸ್ವಿಯವರಲ್ಲಿ 'ವಾಸ್ತವವಾದಿಪ್ರಜ್ಞೆ' ನಿಚ್ಚಳವಾಗಿ ಒಡಮೂಡಿದೆ. ವಾಸ್ತವ ಲೋಕದ ವಸ್ತುಸತ್ಯಗಳಿಗೆ ಕಲಾತ್ಮಕತೆಯ ಸ್ಪರ್ಶ ನೀಡುವ ಕೌಶಲ್ಯ ತೇಜಸ್ವಿಯವರ ಭಾಷೆ ಮತ್ತು ಲೇಖಕ ಪ್ರತಿಭೆಗೆ ಸಿದ್ಧಿಸಿದೆ. ಈ ವಿಶಿಷ್ಟಾನುಭವವು ಅವರ ಸಮಗ್ರ ಕಥಾಸಾಹಿತ್ಯದ ಅರಿವಿನಿಂದ ಸಾಧ್ಯವಾಗುತ್ತದೆ.

ಪ್ರಸ್ತುತ ನಿಬಂಧಕ್ಕೆ **'ತೇಜಸ್ವಿ ಅವರ ಕಥಾ ಸಾಹಿತ್ಯದಲ್ಲಿ ಪ್ರಕೃತಿ'** ಎಂಬ ವಿಷಯವನ್ನು ಆಯ್ಕೆ ಮಾಡಲು ಮೇಲಿನ ಸಂಗತಿಯೇ ಕಾರಣವಾಗಿದೆ. ಆದ್ದರಿಂದ ತೇಜಸ್ವಿಯವರ ಕಥಾಸಾಹಿತ್ಯದ ಚೌಕಟ್ಟಿನಲ್ಲಿ ವರ್ಣಿತವಾಗಿರುವ ಪ್ರಕೃತಿಯ ವಸ್ತು ವಿಷಯಗಳನ್ನು ಈ ಅಧ್ಯಯನಕ್ಕೆ ಆಯ್ಕೆ ಮಾಡಿಕೊಂಡಿರುತ್ತೇನೆ.

ಈ ಅಧ್ಯಯನ ವ್ಯಾಪ್ತಿಯಲ್ಲಿ ಬರುವ ಪ್ರಮುಖ ಕೃತಿಗಳೆಂದರೆ 'ಹುಲಿಯೂರಿನ ಸರಹದ್ದು', 'ಅಬಚೂರಿನ ಪೋಸ್ಟಾಫೀಸು', 'ಕಿರಗೂರಿನ ಗಯ್ಯಾಳಿಗಳು', ಕಥಾ ಸಂಕಲನಗಳು ಮತ್ತು 'ನಿಗೂಢ ಮನುಷ್ಯರು', 'ಕರ್ವಾಲೊ', 'ಚಿದಂಬರ ರಹಸ್ಯ', 'ಜುಗಾರಿಕ್ರಾಸ್', 'ಮಾಯಾಲೋಕ–1' ಕಾದಂಬರಿಗಳು. ಇವುಗಳನ್ನು ಒಟ್ಟಾಗಿಸಿ ಅವುಗಳಲ್ಲಿರುವ ಸಾಮಾಜಿಕ, ರಾಜಕೀಯ, ಆರ್ಥಿಕ, ವೈಚಾರಿಕ, ವೈಜ್ಞಾನಿಕ ಅಂಶಗಳನ್ನು ಈ ಕಥಾಸಾಹಿತ್ಯದ ಶೀರ್ಷಿಕೆ ಅಡಿಯಲ್ಲಿ ವಿಶ್ಲೇಷಿಸಲಾಗುವುದು.

ತೇಜಸ್ವಿ ಅವರ ಒಟ್ಟು ಕಥಾಸಾಹಿತ್ಯದಲ್ಲಿ ನಿಸರ್ಗದ ಬಗೆಗೆ ಇರುವ ಕಾಳಜಿ, ಅದರ ನಿಗೂಢತೆಯನ್ನು ಕುರಿತ ವಿಸ್ಮಯ ಹಾಗೂ ಮನುಷ್ಯನ ಅಸ್ತಿತ್ವ ನಿರ್ಮಾಣದಲ್ಲಿ ಪ್ರಕೃತಿಯ ಪಾತ್ರ ವಿಶಿಷ್ಟವಾಗಿ ಅಭಿವ್ಯಕ್ತಿ ಪಡೆದಿದೆ. ಆ ಅಭಿವ್ಯಕ್ತಿಯ ಕಲಾತ್ಮಕತೆಯನ್ನು ದರ್ಶಿಸುವುದೇ, ಈ ನಿಬಂಧದ ಉದ್ದೇಶವಾಗಿದೆ. ಅದಕ್ಕಾಗಿ ಮಾನವ ಬದುಕಿಗೆ ಕೇಂದ್ರವಾಗಿರುವ ಪ್ರಕೃತಿಯ ಸಾವಯವ ಸಂಬಂಧಗಳನ್ನು ಪ್ರಕೃತಿ ಮತ್ತು ಮಾನವ, ಪ್ರಕೃತಿ ಮತ್ತು ಸಮಾಜ, ಪ್ರಕೃತಿ ಮತ್ತು ವೈಚಾರಿಕತೆ, ಪ್ರಕೃತಿ ಮತ್ತು ಆರ್ಥಿಕತೆ, ಪ್ರಕೃತಿ ಮತ್ತು ಧರ್ಮ, ಪ್ರಕೃತಿ ಮತ್ತು ವಿಜ್ಞಾನ, ಪ್ರಕೃತಿ ಮತ್ತು ರಾಜಕೀಯ, ಪ್ರಕೃತಿ ಮತ್ತು ಸೌಂದರ್ಯ, ಪ್ರಕೃತಿ ಮತ್ತು ತತ್ವಶಾಸ್ತ್ರ, ಪ್ರಕೃತಿ ಮತ್ತು ಸಂಸ್ಕೃತಿ–ನೆಲೆಗಳಲ್ಲಿ ವಿಶ್ಲೇಷಿಸುವ ಚೌಕಟ್ಟನ್ನು ನಿರ್ಮಿಸಿ ಕೊಳ್ಳಲಾಗಿದೆ. ಇದು ಈ ಅಧ್ಯಯನದ ವ್ಯಾಪ್ತಿಯೂ ಹೌದು. ಅಲ್ಲದೇ, ಈ ಅಧ್ಯಯನದ

ಮೂಲಕ ತೇಜಸ್ವಿಯವರು ತಮ್ಮ ಸಮಕಾಲೀನ ಲೇಖಕರ ನಡುವೆ ಪ್ರಕೃತಿಯ ನಿರೂಪಣೆಯಲ್ಲಿ ಹೇಗೆ ವಿಶಿಷ್ಟರಾಗಿ ನಿಲ್ಲುತ್ತಾರೆ ಎಂಬ ಅಂಶವನ್ನು ದಾಖಲಿಸುವ ಉದ್ದೇಶ ನನ್ನದಾಗಿದೆ. ಒಟ್ಟಾರೆ ಈ ಅಧ್ಯಯನವು ಪುಟಮಿತಿಯ ಕಾರಣಕ್ಕಾಗಿ ಪ್ರಾತಿನಿಧಿಕ ರೂಪದಲ್ಲಿರುತ್ತದೆ ಎಂದು ಸ್ಪಷ್ಟಪಡಿಸಬಯಸುತ್ತೇನೆ.

*****

# ಅಧ್ಯಾಯ-೨

## ಕಥಾಸಾಹಿತ್ಯದ ವಸ್ತು ವಿಷಯಗಳ ವಿನ್ಯಾಸ

ವಿಶ್ವವೂ ಅಖಂಡವಾದುದು. ಅದಕ್ಕಿರುವ ಅಖಂಡ ಸ್ವರೂಪ ಕುರಿತು. ಪ್ರಾಚೀ ಕಾಲದಿಂದಲೂ ಗಂಭೀರ ಚರ್ಚೆಗಳು ನಡೆದಿವೆ. ತತ್ವಜ್ಞಾನಿಗಳು, ದಾರ್ಶನಿಕರು, ಮತಸ್ಥಾಪಕರು, ಕವಿಗಳು, ವಿಜ್ಞಾನಿಗಳು, ವಿವಿಧ ಬಗೆಯ ಸಂಶೋಧಕರು ಹೀಗೆ ಎಲ್ಲರೂ ಒಂದಲ್ಲ ಒಂದು ರೀತಿಯಲ್ಲಿ ಅದರ ಉಗಮ, ವಿಕಾಸಗಳ ಬಗೆಗೆ ತಮ್ಮ ಅಮೂಲ್ಯ ವಿಚಾರಗಳನ್ನು ಮಂಡಿಸಿದ್ದಾರೆ. ಆ ವಿಚಾರಗಳ ಒಟ್ಟು ಸಾರವು ವಿಶ್ವದ ಅಖಂಡತ್ವದ ಅರಿವು ಮೂಡಿಸುವಲ್ಲಿ ಯಶಸ್ವಿಯಾಗಿದೆ.

ಈ ಹಿನ್ನೆಲೆಯಲ್ಲಿ ವಿಶ್ವದ ಉಗಮ, ವಿಕಾಸಗಳನ್ನು ಅರ್ಥೈಸಿಕೊಳ್ಳುವುದು ಸುಲಭವಾಗಿದೆ. ವಿಶ್ವದಲ್ಲಿ ಎರಡು ರೀತಿಯ ವಿಕಾಸಗಳಿವೆ. ಒಂದು ನೈಸರ್ಗಿಕ ವಿಕಾಸ, ಮತ್ತೊಂದು ಸಾಮಾಜಿಕ ವಿಕಾಸ. ಈ ಎರಡು ಬಗೆಯ ವಿಕಾಸಗಳಿಂದ ಭೂಮಿಯ ಮೇಲೆ ಮಾನವನ 'ಜೀವನ ವಿಧಾನವು' ತುಂಬ ವ್ಯವಸ್ಥಿತವಾಗಿ ರೂಪುಗೊಳ್ಳಲು ಸಾಧ್ಯವಾಗಿದೆ. ಇಂತಹ ವ್ಯವಸ್ಥಿತ ಜೀವನ ವಿಧಾನವು ನಿಸರ್ಗವನ್ನು ಆಧಾರವಾಗಿಟ್ಟುಕೊಂಡು ನಡೆದಿದೆ ಎಂಬ ಅಂಶವು ಇಲ್ಲಿ ಪ್ರಧಾನವಾದ ವಿಚಾರ. ವಿಶ್ವದ ಈ ಅಖಂಡತ್ವದ ವಿದ್ಯಮಾನವು ವಿವಿಧ ಜ್ಞಾನಶಾಖೆಗಳಾಗಿ ಅಭಿವ್ಯಕ್ತಿ ಪಡೆದಿದೆ. ವಿಶ್ವದ ಸಮಗ್ರ ತಿಳುವಳಿಕೆಯೇ ಜ್ಞಾನ.

ನೈಸರ್ಗಿಕ ವಿಕಾಸವನ್ನು ಕುರಿತು ಜೀವ ವಿಜ್ಞಾನ, ಭೌತವಿಜ್ಞಾನ ಹಲವು ಕ್ಷೇತ್ರಗಳು ಚರ್ಚಿಸುತ್ತವೆ. ಅದೇ ರೀತಿ ಸಾಮಾಜಿಕ ವಿಕಾಸವನ್ನು ಕುರಿತು ಮಾನವಿಕ ವಿಷಯಗಳಾದ ಸಮಾಜಶಾಸ್ತ್ರ, ಇತಿಹಾಸ, ಸಾಹಿತ್ಯ, ಕಲೆ ಮುಂತಾದ ಶೈಕ್ಷಣಿಕ ಶಿಸ್ತಿನಲ್ಲಿ ಚರ್ಚಿಸುವುದನ್ನು ಕಾಣಬಹುದು. ಈ ಜ್ಞಾನ ಕ್ಷೇತ್ರಗಳು ಮಾನವ ಲೋಕದ ಅನುಭವ, ಆಲೋಚನೆ, ಕ್ರಿಯೆ, ಪ್ರತಿಕ್ರಿಯೆಗಳನ್ನು ಒಂದಲ್ಲ ಒಂದು ರೀತಿಯಲ್ಲಿ ಗ್ರಹಿಸುತ್ತಾ, ಅವುಗಳ ವ್ಯಾಖ್ಯಾನ ಮಾಡಿವೆ.

ಸಾಹಿತ್ಯದ ಉದ್ದೇಶವು ಸಮಾಜವೇ ಆಗಿರುವುದರಿಂದ ವಿಜ್ಞಾನ ಮತ್ತು ಮಾನವೀಕ ಎಂಬ ಭೇದವೆಣಿಸದೆ ಎಲ್ಲವನ್ನು ಸಮಗ್ರವಾಗಿ ಸ್ವೀಕರಿಸಿ, ಅವುಗಳಿಗೆ ಕಲೆಯ ರೂಪ ಕೊಡುತ್ತದೆ. ಜಗತ್ತಿನ ಎಲ್ಲಾ ಭಾಷೆ, ಸಾಹಿತ್ಯ, ಸಮಾಜಗಳ ಸಂದರ್ಭದಲ್ಲಿ ಈ ಮಾತು ನಿಜ. ಭೂಮಿಯ ಮೇಲಿನ ಮಾನವರ ಜೀವನಕ್ಕೆ ನಿಸರ್ಗವೇ ಆಧಾರ. ಸಾಹಿತ್ಯ

ಕ್ಷೇತ್ರದಲ್ಲಿ ಅದರ ಪಾತ್ರ ಹಿರಿದಾದುದು. ಜಗತ್ತಿನ ಸಾವಿರಾರು ವರ್ಷಗಳ ಸಾಹಿತ್ಯ ಚರಿತ್ರೆಯೇ ಇದಕ್ಕೆ ಸಾಕ್ಷಿ. ಪ್ರಾಚೀನ ಸಾಹಿತ್ಯದಲ್ಲಿ ನಿಸರ್ಗವನ್ನು ದೈವಿಕ ಪ್ರಜ್ಞೆಯಿಂದ, ಸೌಂದರ್ಯದ ದೃಷ್ಟಿಕೋನದಿಂದ ವರ್ಣಿಸಿರುವುದೇ ಹೆಚ್ಚು. ಆದರೆ ಆಧುನಿಕ ಕಾಲದಲ್ಲಿ ನಿಸರ್ಗವನ್ನು ಕುರಿತು ನೋಡುವ ದೃಷ್ಟಿಕೋನವೇ ಬೇರೆ.

ವೈಜ್ಞಾನಿಕ ಅನ್ವೇಷಣೆಗಳು ಹೆಚ್ಚಿದಂತೆಲ್ಲಾ ನಿಸರ್ಗವನ್ನು ಅರ್ಥೈಸಿಕೊಳ್ಳುವ ದೃಷ್ಠಿಕೋನಗಳೇ ಬದಲಾಗಿವೆ. ಆಧುನಿಕ ಕನ್ನಡ ಸಾಹಿತ್ಯದಲ್ಲಿ ಈ ಬಗೆಯ ವೈಚಾರಿಕ ಪಲ್ಲಟಗಳನ್ನು ಗುರುತಿಸಬಹುದು. ನವ್ಯ-ನವ್ಯೋತ್ತರ ಸಂದರ್ಭದ ಹಲವಾರು ಸಾಹಿತ್ಯ ಕೃತಿಗಳು ಈ ಮಾತಿಗೆ ನಿದರ್ಶನವಾಗುತ್ತವೆ. ನವೋದಯದ ರಸದೃಷ್ಟಿ, ಆಧ್ಯಾತ್ಮಿಕ ನಿಲುವುಗಳು ಮಾಯವಾಗಿ ನಿಸರ್ಗವನ್ನು ವಾಸ್ತವಿಕ ನೆಲೆಯಲ್ಲಿ ಗ್ರಹಿಸುವ, ಅದೇ ಅರ್ಥದಲ್ಲಿ ಅವುಗಳಿಗೆ ಕಲಾತ್ಮಕ ರೂಪಕೊಡುವ ನೂತನ ಧೋರಣೆಯು ಹೊಸಗನ್ನಡದ ಲೇಖಕರಿಂದ ಸಾಧ್ಯವಾಯಿತು. ನವ್ಯದ ವ್ಯಕ್ತಿ ವಿಶೇಷಗಳು, ವಾಸ್ತವವಾದಿ ನಿಲುವುಗಳು ಹಾಗೂ ನವ್ಯೋತ್ತರ ಕಾಲದ ಸಾಮಾಜಿಕ ಆಶಯಗಳು ನೂತನ ವೈಜ್ಞಾನಿಕ ದೃಷ್ಟಿಕೋನದ ಆವಿಷ್ಕಾರಕ್ಕೆ ನಾಂದಿಯಾದವು.

ನವ್ಯ-ನವ್ಯೋತ್ತರ ಸಂದರ್ಭದ ಸುಮಾರು ಐದು ದಶಕಗಳವರೆಗೆ ಕನ್ನಡ ಸಾಹಿತ್ಯ ದಲ್ಲಾಗಿರುವ ಬದಲಾವಣೆಗಳು ಹಲವಾರು. ವಿಶೇಷವಾಗಿ ಈ ಅವಧಿಯಲ್ಲಿ ಪ್ರಖರವಾದ ಸಾಮಾಜಿಕ, ರಾಜಕೀಯ, ಆರ್ಥಿಕ ಚಿಂತನೆಗಳು ಕಾಣಿಸಿಕೊಂಡು ಸಮಾಜದ ಎಲ್ಲಾ ಸ್ತರಗಳಲ್ಲೂ ವೈಜ್ಞಾನಿಕತೆಗೆ, ವೈಚಾರಿಕತೆಗೆ, ಸಾಮಾಜಿಕ ನ್ಯಾಯಕ್ಕೆ ಒತ್ತು ನೀಡುತ್ತಿದ್ದ ಕಾಲ. ಈ ಸ್ಥಿತ್ಯಂತರವೂ ನವ್ಯ-ನವ್ಯೋತ್ತರ ಲೇಖಕರ ಬರವಣಿಗೆಗೆ ವಸ್ತು ಸಾಮಗ್ರಿಗಳನ್ನು ಒದಗಿಸಿರುವುದು ಸ್ಪಷ್ಟ. ಈ ವಿಚಾರಗಳೇ ಆಗಿನ ಲೇಖಕರ ಧೋರಣೆಗಳನ್ನು ರೂಪಿಸಿವೆ.

ತೇಜಸ್ವಿಯವರು ವಿಕಾಸತತ್ವಗಳ ನೆಲೆಗಟ್ಟಿನಲ್ಲಿ ನಿಸರ್ಗ ಮತ್ತು ಮಾನವ ಬದುಕಿನ ಸಾವಯವ ಸಂಬಂಧಗಳನ್ನು ನಿರೂಪಿಸುವುದರ ಮೂಲಕ, ಮಾನವ ನಿಸರ್ಗದ ನಡುವೆ ಇರಲೇಬೇಕಾದ ಸಮತೋಲನದ ಅತ್ಯುನ್ನತ ದರ್ಶನವನ್ನು ತಮ್ಮ ಕಥಾಸಾಹಿತ್ಯದಲ್ಲಿ ಸಾಕಾರಗೊಳಿಸಿದ್ದಾರೆ. ಈ ದೃಷ್ಟಿಯಿಂದ ಅವರೊಬ್ಬ ಶ್ರೇಷ್ಠ ವಾಸ್ತವವಾದಿ ಲೇಖಕ. ಕುವೆಂಪು ರೀತಿಯಲ್ಲಿ ಪ್ರಕೃತಿಯನ್ನು ಆರಾಧಿಸಿ, ಆಧ್ಯಾತ್ಮೀಕರಿಸದೆ, ಕಾರಂತರಂತೆ ನಿಸರ್ಗದ ವಿದ್ಯಮಾನಗಳನ್ನು ವೈಚಾರಿಕವಾಗಿ ಪ್ರಶ್ನಿಸಿದೆ. ಅವರಿಬ್ಬರ ಸೃಜನಶೀಲತೆ ಮತ್ತು ದೃಷ್ಟಿಕೋನಗಳನ್ನು ಅಪೂರ್ವ ಬೆರಗನ್ನಾಗಿ ರೂಪಾಂತರಿಸಿಕೊಂಡಿರುವ ತೇಜಸ್ವಿ. ಆ ಬೆರಗಿನ ನಿರಂತರ ಅನ್ವೇಷಣೆಯಲ್ಲಿ ತಲ್ಲೀನರಾಗಿ, ಅದನ್ನೇ ತಮ್ಮ ಕಥಾಸಾಹಿತ್ಯದಲ್ಲಿ ವಸ್ತುವಾಗಿಸಿದ್ದಾರೆ. ಇಂತಹ ಅಖಂಡ ಪ್ರಕೃತಿಯನ್ನು ಅವರು ಯಾವಯಾವ ನೆಲೆಗಟ್ಟಿನಲ್ಲಿ

ಬಳಸಿಕೊಂಡಿದ್ದಾರೆ ಎಂಬ ವಿಷಯವೇ ಅವರ ಕಥಾ ಸಾಹಿತ್ಯ ಕುರಿತ ಈ ನಿಬಂಧದ ಅಧ್ಯಯನಕ್ಕೆ ಪ್ರೇರಣೆಯಾಗಿದೆ.

ಲೋಹಿಯಾ ಅವರ ಸಮಾಜವಾದಿ ಚಿಂತನೆಗಳು ತೇಜಸ್ವಿ ಅವರ ವಾಸ್ತವವಾದಿ ದೃಷ್ಟಿಕೋನಗಳನ್ನು ಬೆಳೆಸಿವೆ. ಅದೇ ದೃಷ್ಟಿಕೋನದಿಂದ ಭಾರತೀಯ ಸಮಾಜದ ಕಟುವಾಸ್ತವಗಳಾದ ವರ್ಣಾಶ್ರಮಪದ್ಧತಿ, ಧರ್ಮ, ರಾಜಕೀಯ, ಆರ್ಥಿಕ, ಅಸಮಾನತೆ, ಅಜ್ಞಾನ, ಸಂಘರ್ಷ ಇವುಗಳ ಚಿತ್ರಣ ನೀಡುತ್ತಾರೆ. ವಿಜ್ಞಾನ ಮತ್ತು ಇತರ ಕ್ಷೇತ್ರಗಳ ಸಂಶೋಧನೆ, ಆವಿಷ್ಕಾರಗಳು ತೇಜಸ್ವಿಯವರ ಜಗತ್ತನ್ನು ಅಪಾರ ಕುತೂಹಲ, ಬೆರಗು ಮತ್ತು ಮುಗ್ಧತೆಗಳಿಂದ ನೋಡುವಂತೆ ಮಾಡುತ್ತವೆ. ಹೀಗೆ ಪರಿಸರ ಮತ್ತು ಮಾನವ ಲೋಕಗಳನ್ನು ಸೂಕ್ಷ್ಮವಾಗಿ ಗ್ರಹಿಸುತ್ತಲೇ ಇದ್ದ ತೇಜಸ್ವಿಯವರಿಗೆ ಓದಿನ ಮೂಲಕ ಪಡೆದುಕೊಂಡ ಜ್ಞಾನದಷ್ಟೇ ಅನುಭವದ ಮೂಲಕ ಪಡೆದುಕೊಂಡ ಅರಿವೂ ಮುಖ್ಯ ಎಂಬ ವಿವೇಕವೂ ಸೇರಿಕೊಳ್ಳುತ್ತದೆ. ಈ ವಿವರಣೆಯು, ತೇಜಸ್ವಿಯವರು ಇಡೀ ನಿಸರ್ಗ ಮತ್ತು ಮಾನವಸಮಾಜಗಳನ್ನು ಅಖಂಡ ದೃಷ್ಟಿಕೋನದಿಂದ ಗ್ರಹಿಸುತ್ತಿದ್ದರೆಂಬುದಕ್ಕೆ ಸಾಕ್ಷಿಯಾಗುತ್ತದೆ.

"ಪರಿಸರ ಅಂದಾಕ್ಷಣ ಕೇವಲ ಗಿಡ–ಮರ, ಪ್ರಾಣಿ–ಪಕ್ಷಿಗಳಷ್ಟೇ ಅಲ್ಲ. ಇಲ್ಲಿ ಸಾಮಾಜಿಕ ಪರಿಸರವಿದೆ. ಒಂದು ನೈಸರ್ಗಿಕ ಪರಿಸರವಿದೆ. ಬೌದ್ಧಿಕವಾದ ಪರಿಸರವೂ ಇದೆ. ಈ ಕಾರಣದಿಂದ ತೇಜಸ್ವಿ ಅವರ ಸಾಹಿತ್ಯದ ಕೇಂದ್ರ ಪ್ರಜ್ಞೆ ಈ ಪರಿಸರ. ಪರಿಸರವನ್ನು ಕೇವಲ relative term ಆಗಿ ಇಟ್ಟುಕೊಳ್ಳಬೇಕು. ಪರಿಸರವೆಂದರೆ, ಕೇವಲ ಪರಿಸರವಾದಿ ಚಳುವಳಿ. ಮರ–ಗಿಡ, ಬೆಟ್ಟ–ಗುಡ್ಡ, ಪ್ರಾಣಿ–ಪಕ್ಷಿ ಅಷ್ಟೇ ಅಲ್ಲ. ಅದರೊಟ್ಟಿಗೆ ಇರುವ ಅಖಂಡವಾದ ಈ ಜಗತ್ತು, ಅದರೊಳಗಿರುವ ಮನುಷ್ಯರು, ಅವರ ಆಲೋಚನಾಕ್ರಮಗಳು, ಮಾಡುವ ಪರಿಣಾಮ, ಅಲ್ಲಿರುವ ಗುಡ್ಡಗಳು, ಬೆಟ್ಟಗಳು, ನದಿಗಳು ನಾವು ಮಾಡುವ ರಾಜಕಾರಣದಿಂದ ಅವುಗಳ ಮೇಲಾಗುವ ಪರಿಣಾಮ ಈ ಎಲ್ಲವನ್ನು ಪ್ರಚೋದಿಸುವುದು. ಅವರ ಮನಸ್ಸಿನೊಳಗೆ ಅಂತರ್ಗತವಾಗಿರುವುದು ಈ ಪರಿಸರದ ವಿಸ್ಮಯ"[೧]

ತೇಜಸ್ವಿ ಅವರ ಕಥಾ ಸಾಹಿತ್ಯವನ್ನು ಎರಡು ಹಂತಗಳಲ್ಲಿ ಗ್ರಹಿಸಬೇಕಾಗುತ್ತದೆ. ಒಂದು ನವ್ಯದ ಸಂದರ್ಭ (ತುರ್ತು ಪರಿಸ್ಥಿತಿಯ ಪೂರ್ವ), ಮತ್ತೊಂದು ನವ್ಯೋತ್ತರ ಸಂದರ್ಭ (ತುರ್ತು ಪರಿಸ್ಥಿತಿಯ ನಂತರ). ನವ್ಯದ ಕಾಲವು ಸುಮಾರು ೧೯೫೦ ರಿಂದ ೧೯೭೫. ಯುರೋಪ್ ಸಮಾಜದ ಬದುಕಿನ ಅಸಂಗತತೆ, ಮಾನವನ ಅಸ್ತಿತ್ವದಂತಹ ಪ್ರಶ್ನೆಗಳ ಪ್ರಭಾವಕ್ಕೊಳಗಾಗಿ ಕನ್ನಡದ ಲೇಖಕರು ಸಾಹಿತ್ಯದ ಭಾಷೆ, ವಸ್ತು, ರೂಪ ಇವುಗಳನ್ನು ಬದಲಿಸಿದರು. ಈ ಬದಲಾವಣೆಯೇ ನವ್ಯವಾಯಿತು. ಆ ಕಾಲದ ಗೋಕಾಕ್

ಅಡಿಗರು, ಅನಂತಮೂರ್ತಿ, ಕುಸುಮಾಕರ ದೇವರಗಣ್ಣೂರು, ಚಂದ್ರಶೇಖರ್ ಪಾಟೀಲ್, ಚಂದ್ರಕಾಂತ್ ಕುಸನೂರ್, ಗಿರಿ, ಎ.ಕೆ.ರಾಮಾನುಜನ್, ಯಶವಂತ ಚಿತ್ತಾಲ, ಗಿರೀಶ್ ಕಾರ್ನಾಡ್, ತೇಜಸ್ವಿ, ರಾಘವೇಂದ್ರ ಖಾಸನೀಸ, ಗಿರಡ್ಡಿ ಗೋವಿಂದರಾಜು, ವೀಣಾ ಯಲ್ಬುರ್ಗಿ ಮುಂತಾದವರು ನವ್ಯ ಪರಂಪರೆಯ ಪ್ರಮುಖ ಲೇಖಕರಾಗಿದ್ದಾರೆ. ಇದೇ ಲೇಖಕರಲ್ಲಿ ಹಲವರು ತುರ್ತು ಪರಿಸ್ಥಿತಿಯ ನಂತರವೂ ತಮ್ಮ ಸಾಹಿತ್ಯ ರಚನೆಯನ್ನು ಮುಂದುವರಿಸಿದ್ದಾರೆ. ಆದರೆ ನವ್ಯದ ಸಂದರ್ಭದ ಅವರ ಬಹುಪಾಲು ಕೃತಿಗಳಲ್ಲಿ ಕಂಡುಬರುವ ಮುಖ್ಯವಿಚಾರವೆಂದರೆ: ಪಾಶ್ಚಾತ್ಯರ ವ್ಯಕ್ತಿ ವಿಶಿಷ್ಟ ಸಿದ್ಧಾಂತವನ್ನು ನಿರೂಪಿಸಿರುವುದು. ತೇಜಸ್ವಿ ಕೂಡ ಈ ಪ್ರಭಾವಗಳಿಂದ ಹೊರತಾಗಲಿಲ್ಲ.

ನವ್ಯವು ತನ್ನ ಪರಾಕಾಷ್ಠೆಯನ್ನು ತಲುಪಿದ್ದ ಹೊತ್ತಿನಲ್ಲಿ ತೇಜಸ್ವಿಯವರು ಕಥಾಗಾರರಾಗಿ ಸಾಹಿತ್ಯ ಕ್ಷೇತ್ರ ಪ್ರವೇಶಿಸುತ್ತಾರೆ. ಆ ಅವಧಿಯ ಅವರ ಪ್ರಮುಖ ಕೃತಿಗಳೆಂದರೆ: 'ಹುಲಿಯೂರಿನ ಸರಹದ್ದು', 'ಸ್ವರೂಪ', 'ನಿಗೂಢ ಮನುಷ್ಯರು', 'ಅಬಚೂರಿನ ಪೋಸ್ಟಾಫೀಸು'– ಕಥಾ ಸಂಕಲನಗಳು. ಈ ಕೃತಿಗಳ ಮೂಲಕ ಪ್ರಕಟವಾಗಿರುವ ವೈಚಾರಿಕತೆಯನ್ನು ಸಮರ್ಥಿಸಲೋ ಎಂಬಂತೆ ಅವರ 'ವ್ಯಕ್ತಿ ವಿಶಿಷ್ಟ ಸಿದ್ಧಾಂತ' ಎಂಬ ವಿಮರ್ಶಾ ಲೇಖನಗಳ ಪ್ರಕಟಣೆಯೂ ಆಗಿದೆ. ಈ ಸಿದ್ಧಾಂತದ ಪ್ರಕಾರ ಸಮಷ್ಟಿ ಪ್ರಜ್ಞೆಗಿಂತ ವ್ಯಷ್ಟಿ ಪ್ರಜ್ಞೆ ಮುಖ್ಯವಾಗುತ್ತದೆ. ಕನ್ನಡದ ನವ್ಯ ಸಾಹಿತ್ಯವು ಯುರೋಪ್ ಸಮಾಜದ ಬದುಕಿನ ಅಸಂಗತತೆ, ಅಸ್ತಿತ್ವವಾದದಂತಹ ಸಮಸ್ಯೆಗಳು ಹುಟ್ಟಿಸಿದ ದೃಷ್ಟಿ ಧೋರಣೆಗಳಿಂದ ಮುಕ್ತವಾಗಲು ಸಾಧ್ಯವಾಗಿರುವುದಿಲ್ಲ. ಅಥವಾ ನವ್ಯ ಸಾಹಿತ್ಯಕ್ಕೆ ಅದೇ ಪ್ರೇರಣೆಯಾಗಿದೆ.

ತೇಜಸ್ವಿಯವರು ವೈಚಾರಿಕವಾಗಿ ಇಂತಹ ಪ್ರಭಾವಗಳಿಂದ ಹೊರತಾಗಿ ಉಳಿಯುವುದು ಸಾಧ್ಯವಾಗಲಿಲ್ಲ. ತೇಜಸ್ವಿಯವರ ಕಥಾಸಾಹಿತ್ಯದಲ್ಲಿ ಪ್ರಧಾನ ಭಿತ್ತಿಯಾಗಿರುವ ಪ್ರಕೃತಿಯು 'ವ್ಯಕ್ತಿ ವಿಶಿಷ್ಟಿ ಸಿದ್ಧಾಂತ'ದ ದೃಷ್ಟಿ ಧೋರಣೆಗಳಿಗೆ ಅನುಗುಣವಾಗಿಯೇ ವಸ್ತು ವಿಷಯವಾಗುತ್ತದೆ. ಆದ್ದರಿಂದಲೇ ಆ ಕಥಾಸಂಕಲನದ ಶೀರ್ಷಿಕೆಗಳು ಪ್ರಕೃತಿಯ ಗುಣ ಸ್ವಭಾವಗಳ ಪ್ರತೀಕವಾಗಿವೆ. ಪ್ರಕೃತಿಯ ನಿಗೂಢತೆ, ವಿಸ್ಮಯಗಳಂತೆ ಮಾನವ ಜೀವನದ ಅಸಂಗತತೆಗಳು ಕೂಡ ತೇಜಸ್ವಿಯವರ ಬಹುಪಾಲು ಕಥೆಗಳ ವಸ್ತುವಿಷಯಗಳಾಗಿವೆ. ಈ ಹಿನ್ನೆಯಲ್ಲಿ ಬೇರೆ ಬೇರೆ ಕಥೆಗಳಲ್ಲಿ ಕಂಡು ಬರುವ ವಸ್ತು ಸಾಮಗ್ರಿಗಳು ಯಾವುವು ಎಂದು ಸುಲಭವಾಗಿ ಗ್ರಹಿಸಬಹುದು.

'ಸ್ವರೂಪ' ಕಾದಂಬರಿಯಲ್ಲಿ ಶ್ರೀನಿವಾಸ ಹೇಳುವ ವಿವರಗಳು ಕೇವಲ ಅವನೊಬ್ಬನಿಗೆ ಸಂಬಂಧಿಸಿರದೆ, ಸಮಸ್ತ ಮಾನವರಿಗೆ ಸಂಬಂಧಿಸಿದಂತಿದೆ. ಅವನು ತನ್ನ ಜೀವನದ ಘಟನೆಗಳನ್ನು ಒಂದೊಂದಾಗಿ ವಿವರಿಸುತ್ತಾ ಹೋಗುತ್ತಾನೆ. ಜೀವನ ಹೇಗೆ ತನ್ನ

ಅನುಭವವನ್ನು ವಿವರಿಸುತ್ತಾ ಹೋದಂತೆ ವ್ಯಕ್ತಿ ಪರಿಪೂರ್ಣವಾಗುತ್ತಾನೆ ಎಂಬುದನ್ನು ಪರಿಸರದ ಹಿನ್ನೆಲೆಯಲ್ಲಿ ವಿವರಿಸುವುದೇ ಅಲ್ಲಿನ ವಸ್ತು.

'ನಿಗೂಢ ಮನುಷ್ಯರು' ಕಿರುಕಾದಂಬರಿಯಲ್ಲಿ ಪ್ರಕೃತಿ ಅಂಗಗಳಾದ ಉಗ್ರಗಿರಿ, ಎಣ್ಣೆಹೊಳೆ, ಭೂಕಂಪ ಮಳೆಮೋಡಗಳಲ್ಲಿ ವ್ಯಕ್ತಿ-ವ್ಯಕ್ತಿಗಳ ಮುಖಾಮುಖಿಯಲ್ಲಿ ಉಂಟಾಗುವ ಸಂಬಂಧಗಳ ಅನಾವರಣದಲ್ಲಿ, ಅವುಗಳ ಭ್ರಾಂತಿಗಳಲ್ಲಿ ಹಾಗೂ ವ್ಯಕ್ತಿಗಳು ತಮಗೆ ತಾವೇ ನಿಗೂಢರಾಗಿ ಬಿಡುವ ಸಂದಿಗ್ಧತೆಯು ಇಲ್ಲಿ ವ್ಯಕ್ತವಾಗುತ್ತವೆ. ಮಾನವನ ಅಂತರಂಗದ ನಿಗೂಢತೆ ಹಾಗೂ ಪ್ರಕೃತಿಯ ಭಯಾನಕ ನಿಗೂಢತೆಗಳನ್ನು ಮುಖಾಮುಖಿಯಾಗಿಸುವುದು ಈ ಕಿರು ಕಾದಂಬರಿಯ ವಸ್ತುವಾಗಿದೆ.

'ತುಕ್ಕೋಜಿ' ಆಧುನಿಕತೆಯ ಆಕ್ರಮಣದಿಂದ ಹಳ್ಳಿಯ ಪರಿಸರದಲ್ಲಿ ಉಂಟಾಗುವ ಬದಲಾವಣೆಗಳ ಪರಿಯನ್ನು ವರ್ಣಿಸುವುದೇ ಇದರ ಕಥಾವಸ್ತು. ವೈಯಕ್ತಿಕವಾದ ದುರಂತಗಳು ಹೇಗೆ ಒಂದು ಸಮಾಜವನ್ನೇ ಅಲುಗಾಡಿಸಬಲ್ಲವು ಎಂಬುದು ಈ ಕಥೆಯ ಧ್ವನಿಯಾಗಿದೆ. ಅಲ್ಲಿ ತುಕ್ಕೋಜಿ ಮತ್ತು ಸರೋಜ ಆಧುನಿಕತೆಯ ಜೀವನ ಶೈಲಿಗೆ ಹೊಂದಾಣಿಕೆ ಮಾಡಿಕೊಳ್ಳಲು, ಅದರಿಂದ ಬದಲಾವಣೆಗೆ ಹೊಂದಿಕೊಳ್ಳಲು ಅವರು ತುಂಬಾ ಕಷ್ಟಪಡುತ್ತಾರೆ.

'ಕುಬಿ ಮತ್ತು ಇಯಾಲ' ಕತೆಯಲ್ಲಿ ಊರಿನ ರಸ್ತೆ, ಅದಕ್ಕೆ ಅಡ್ಡನಿಂತಿರುವ ಬಂಡೆ ಇವು ಅವರ ಕತೆಯಲ್ಲಿ ಪದೇಪದೇ ದಾಖಲಾಗುವ ಜಡವೆನ್ನಬಹುದಾದ ಪರಿಸರ. ಎಲ್ಲಿ ಪದೇಪದೇ ಪ್ರಕೃತಿ ಮತ್ತು ನಾಗರಿಕತೆಗಳು ಮುಖಾಮುಖಿಯಾಗುವುದೇ ಇಲ್ಲಿಯ ವಸ್ತುವಾಗಿದೆ. ಜೊತೆಗೆ ಕುಬಿಯ ವೈದ್ಯಕೀಯ ಜ್ಞಾನವೇ ಇಲ್ಲಿನ ವಸ್ತು ವಿಷಯವಾಗಿದೆ. ವೈದ್ಯಕೀಯ ಜ್ಞಾನ ಮತ್ತು ಮೂಢನಂಬಿಕೆಗಳ ನಡುವೆ ನಡೆಯುವ ಸಂಘರ್ಷವೇ ಮುಖ್ಯ ವಸ್ತುವಾಗಿದೆ. ಇಡೀ ಊರು ಮೂಢನಂಬಿಕೆಯಿಂದ ತುಂಬಿ ತುಳುಕುತ್ತಿದೆ. ಆಗ ಅಲ್ಲಿನ ಊರನ್ನು ತನ್ನ ವೈದ್ಯಕೀಯ ಜ್ಞಾನದಿಂದ ಬದಲಾವಣೆ ಮಾಡಬೇಕೆಂದು ಹೋರಾಡುವ ಕುಬಿಯನ್ನು ಕಾಣಬಹುದು.

'ಲಿಂಗಬಂದ' ಕತೆಯ ಮುಖ್ಯವಸ್ತು ಭಯ. ಚಿಕ್ಕಮಕ್ಕಳಲ್ಲಿ ಭಯದ ಕಲ್ಪನೆ ಹೇಗೆ ಮೊಳಕೆ ಒಡೆಯುತ್ತದೆ, ಚಿಗುರುತ್ತದೆ, ಬೇರೂತ್ತದೆ ಎಂಬುದನ್ನು ಸೂಕ್ಷ್ಮವಾಗಿ ಚಿತ್ರಿಸಿದ್ದಾರೆ. ಮನೆಯ ಆಳು ಲಿಂಗ ಮಲೆನಾಡಿನ ಪರಿಸರದಿಂದ ಬಂದವನು. ಅವನು ಒಂದು ಹುಡುಗನಿಗೆ ಹೇಳುವ ರಾಕ್ಷಸನ ಕತೆ ಅದನ್ನು ಅವನು ತನ್ನ ತಂಗಿಯಾದ ಸುಭದ್ರೆಗೆ ಹೇಳುವುದು ಅದರ ಜೊತೆಗೆ ಅದರಿಂದಲೇ ಅವನಲ್ಲಿ ಉಂಟಾಗುವ ಭಯವನ್ನು

ಕಾಣಬಹುದು. ಪ್ರಕೃತಿಯ ಬಗ್ಗೆ ಮನುಷ್ಯನಲ್ಲಿ ಆವರಿಸುವ ನಿಗೂಢತೆಯ ಭಯದ ಭಾವನೆಗಳನ್ನು ಈ ಕಥೆಯಲ್ಲಿ ಪರಿಣಾಮಕಾರಿಯಾಗಿ ಚಿತ್ರಿಸಿದ್ದಾರೆ.

'ಕರ್ವಾಲೊ' ಕಾದಂಬರಿಯಲ್ಲಿ ವಸ್ತು ಕಥೆಯ ನಿರೂಪಕ, ಮಂದಣ್ಣ ಎಂಬ ಬಡಹಳ್ಳಿಗ, ಕರ್ವಾಲೊ ಎಂಬ ಸಂಶೋಧಕ ಈ ಮೂವರೂ ತಮ್ಮ ಪರಿಸರದಲ್ಲಿ ಕಂಡುಕೊಂಡ ವಿಸ್ಮಯವೇ ಅದರ ವಸ್ತುವಾಗುತ್ತದೆ. ಮನುಷ್ಯ–ಪ್ರಕೃತಿ, ಮನುಷ್ಯ–ಸಮಾಜ ಸಂಬಂಧಗಳು ಹೇಗೆ ಒಂದನ್ನೊಂದು ಅವಲಂಬಿಸಿವೆ. ಕರ್ವಾಲೋ ಕಥೆ ನಡೆಯುವುದು ಒಂದು ಹಳ್ಳಿಯ ಪರಿಸರದಲ್ಲಿ ಕಥೆಯ ನಿರೂಪಕ, ಮಂದಣ್ಣ ಎಂಬ ಬಡ ಹಳ್ಳಿಗ, ಕರ್ವಾಲೊ ಎಂಬ ಸಂಶೋಧಕ– ಈ ಮೂವರೂ ತಮ್ಮ ಪರಿಸರದಲ್ಲಿ ಕೈಗೊಂಡ ಸಂಶೋಧನೆಯ ಸಂಗತಿಗಳೇ ಕರ್ವಾಲೊದಲ್ಲಿ ಪ್ರಾಮುಖ್ಯತೆ ಪಡೆಯುತ್ತವೆ. ಹಳ್ಳಿಗನಾದ ಮಂದಣ್ಣನಲ್ಲಿ ಹುದುಗಿರುವ ಜ್ಞಾನ ಈ ಕಾದಂಬರಿಯ ಅಡಿಪಾಯ. ಮಂದಣ್ಣನ ಗೆಳೆತನದಿಂದ ಮತ್ತು ಕರ್ವಾಲೊರ ಮಾರ್ಗದರ್ಶನದಿಂದ ನಿರೂಪಕ ಕಂಡುಕೊಂಡ ಅರಣ್ಯ ಮಧ್ಯದ ಜೀವರಾಶಿಯ ನಿಗೂಢ ಬದುಕು ಈ ಕಾದಂಬರಿಯ ಇನ್ನೊಂದು ಸ್ತರ. ಇಲ್ಲಿ ವಿಜ್ಞಾನಿಯಾದ ಕರ್ವಾಲೊ, ಮಂದಣ್ಣ, ಎಂಕ್ಟ, ಬಿರ್ಯಾನಿ ಕರಿಯಪ್ಪ, ಪ್ರಭಾಕರ, ನಿರೂಪಕ ಇವರೆಲ್ಲರೂ ಕರ್ವಾಲೊ ಅವರ ವಿಶಿಷ್ಟ ವಿಜ್ಞಾನದ ಬೆಳಕಿನಲ್ಲಿ, ಕಾಲದೇಶಗಳ ಪರಿಧಿಯನ್ನು ಮೀರಿ ಹಾರುವ ಓತಿಯನ್ನು ಹುಡುಕುವ ಪ್ರಯತ್ನ ನಡೆಸುತ್ತಾರೆ. ಅಂದರೆ ವಿಜ್ಞಾನದ ಒಂದು ಅಂಶವಾದ ವಿಕಾಸವಾದವನ್ನು ಈ ಕಾದಂಬರಿಯು ವಸ್ತುವಾಗಿಸಿಕೊಂಡಿದೆ.

"ದಟ್ಟ ಮಲೆನಾಡಿನ ಆವರಣದಲ್ಲಿ ಬದುಕಿರುವ ಮಂದಣ್ಣನಂತಹ ಸಾಮಾನ್ಯ ವ್ಯಕ್ತಿಯಲ್ಲಿ ಕಂಡುಬರುವ ಪ್ರಕೃತಿ, ವಿಜ್ಞಾನದ ಪ್ರತಿಭೆಯನ್ನು ಕರ್ವಾಲೊರಂತಹ ವಿಜ್ಞಾನಿ ಗುರುತಿಸುವುದು ಹಾಗೂ ಅವನ ಸಹಾಯದಿಂದಲೇ ಜೀವವಿಜ್ಞಾನದ ರಹಸ್ಯದ ಶೋಧನೆಗೆ ತೊಡಗುವುದು ಈ ಕಾದಂಬರಿ ಪ್ರಮುಖ ಅಂಶವಾಗಿದೆ"[೧]

ತೇಜಸ್ವಿ ಕಥಾಸಾಹಿತ್ಯವು ಇಡೀ ಪರಿಸರ, ಇಡೀ ಒಂದು ಮಾನವ ಪರಿಸರ, ಪ್ರಾಣಿಪರಿಸರ ಎಲ್ಲವನ್ನು ಸೇರಿಸಿಕೊಂಡಿದೆ. 'ಚಿದಂಬರರಹಸ್ಯ' ದಲ್ಲಿ ಸಾಮಾಜಿಕ ಸಂಬಂಧಗಳ ವಸ್ತವನ್ನಿಟ್ಟುಕೊಂಡು ಸಾಮಾಜಿಕ ಚಳವಳಿಗಳನ್ನು ಬೇರೆಬೇರೆ ರೀತಿಯಲ್ಲಿ ನೋಡಿರುವುದನ್ನು ಕಾಣಬಹುದು. ಇಲ್ಲಿ ಏಲಕ್ಕಿಗೆ ಬರುವ ಕಾಯಿಲೆ ಕೇವಲ ಏಲಕ್ಕಿಗೆ ಬಂದದ್ದಲ್ಲ. ಇಡೀ ಮಾನವ ಬದುಕಿಗೆ ಬಂದಿದ್ದು ಕಣ್ಣಿಗೆ ಕಾಣದ ಯಾವುದೋ ಒಂದನ್ನು ಹುಡುಕುವ ಪ್ರಯತ್ನ ಮಾಡುತ್ತಾರೆ. ಇಲ್ಲಿ ನಾವು ಪ್ರಕೃತಿಯಲ್ಲಿ ಇಡೀ

ಕೆಸರೂರಿನ ಅವನತಿಯು ಹೇಗೆ ಏಲಕ್ಕಿಯೊಂದಿಗೆ ತಳುಕು ಹಾಕಿಕೊಂಡು ಹೇಗೆ ಅವನತಿ ಹೊಂದಿತು, ಏಲಕ್ಕಿ ಬೆಳೆ ಅವನತಿ ಹೊಂದಲು ಕಾರಣವೇನು? ಅದಕ್ಕೆ ಔಷಧಿ ಏನು? ಎಂಬ ಸಂಶೋಧನೆ, ಕೊನೆಗೆ ಇಡೀ ಊರಿಗೆ ಊರೇ ಬೆಂಕಿಗೆ ಆಹುತಿಯಾಗ ಬೇಕಾದರೆ ರಫಿ ಮತು ಜಯಂತಿಗೆ ಧೂಪದ ಮರದ ಬುಡದಲ್ಲಿ ಅಗಲವಾಗಿ ಕೊಬ್ಬಿ ಬೆಳೆದಿದ್ದ ಒಂದು ಏಲಕ್ಕಿ ಹಿಂಡಿಲು ಕಾಣಿಸುತ್ತದೆ. ಇದೇ ಈ ಕಾದಂಬರಿಯ ಮುಖ್ಯ ಶೋಧವಾಗಿರುತ್ತದೆ. ಅದು ಮೊದಲೇ ದೊರೆತಿದ್ದರೆ ಆ ಊರನ್ನು ವಿನಾಶದ ಅಂಚಿನಿಂದ ಪಾರು ಮಾಡಬಹುದಾಗಿತ್ತು. ಮಾನವನ ಸಮುದಾಯದ ಉಳಿವಿಗೆ ಪ್ರಕೃತಿಯೇ ಪರ್ಯಾಯ ಒದಗಿಸುತ್ತದೆ.

'ಜುಗಾರಿಕ್ರಾಸ್' ಕಾದಂಬರಿಯಲ್ಲಿ ಪರಿಸರದ ವೈಶಾಲ್ಯತೆಗಳು ಮನುಷ್ಯ ನಿಯಂತ್ರಿಸುವ ಪರಿಸರದ ನಿತ್ಯ ಚಟುವಟಿಕೆಗಳನ್ನು ಕಾಣಬಹುದು. ಜುಗಾರಿಕ್ರಾಸ್‌ನಲ್ಲಿ ಮನುಷ್ಯ ಸಮಾಜವು ಇಡೀ ವಿಶ್ವವ್ಯವಸ್ಥೆಯೊಂದಿಗೆ ಸಂಬಂಧ ಹೊಂದಿದೆ. ಜುಗಾರಿಕ್ರಾಸ್ ಎಂಬುದು ಮೂರ್‍ನಾಲ್ಕು ದಾರಿಗಳು ಕೂಡುವ ಜಾಗ. ಅಲ್ಲಿನ ಕಾಡು ರಾಜಕೀಯ, ಏಲಕ್ಕಿ ವ್ಯಾಪಾರ, ಜೂಜು, ಅಲ್ಲಿ ನಡೆಯುವ ಕಾಳದಂಧೆಗೆ ತವರೂರಾಗಿದೆ. ಅಲ್ಲಿನ ಮುಖ್ಯ ಆರ್ಥಿಕ ವ್ಯವಹಾರದ ಏಲಕ್ಕಿ ವ್ಯಾಪಾರವಂತೂ ಪಕ್ಕಾ ಜೂಜಾಗಿದೆ. ಏಲಕ್ಕಿ ಬೆಲೆ ಯಾವ ಕಾರಣಕ್ಕಾಗಿ ಏರುತ್ತದೆ, ಯಾವ ಕಾರಣಕ್ಕಾಗಿ ಇಳಿಯುತ್ತದೆ ಎಂಬುದನ್ನು ತಜ್ಞರು, ಪರಿಣತರು, ಸರ್ಕಾರ ಅಥವಾ ಏಲಕ್ಕಿ ಮಂಡಳಿ ಯಾರಿಗೂ ಪತ್ತೆ ಮಾಡಲಾಗಲಿ ಹೇಳಲಾಗಲಿ ಸಾಧ್ಯವೇ ಇಲ್ಲ. ಇವೆಲ್ಲಾ ಅಲ್ಲಿಯ ಪ್ರಕೃತಿಯೊಂದಿಗೆ ಬೆರತು ಹೋಗಿವೆ.

'ಕಿರಗೂರಿನ ಗಯ್ಯಾಳಿಗಳು' ಕತೆಯಲ್ಲಿ ಪ್ರಕೃತಿ ಸಹಜವಾದ ಮಳೆ, ಬಿರುಗಾಳಿ, ಹೆಬ್ಬಲಸಿನ ಮರ ಉರುಳಿ ಬೀಳುವುದು. ಇದು ಕಿರಗೂರಿನ ಸಾಮಾಜಿಕ ಮತ್ತು ಆರ್ಥಿಕ ಅವನತಿಗೆ ರೂಪಕವಾಗಿದೆ. ಇಲ್ಲಿನ ಸ್ತ್ರೀಯರು ತಮ್ಮ ಮೇಲಿನ ಅನ್ಯಾಯದ ವಿರುದ್ಧ, ಪುರುಷ ಪ್ರಧಾನ ವ್ಯವಸ್ಥೆಯ ವಿರುದ್ಧ ಸಿಡಿದೇಳುವ ಘಟನೆಯೇ ಈ ಕಥೆಯ ಕೇಂದ್ರವಸ್ತುವಾಗಿದೆ. ಜೊತೆಗೆ ಜಾತೀಯತೆಯನ್ನು ಸಹ ನಾವು ಇಲ್ಲಿ ಕಾಣಬಹುದಾಗಿದೆ. ಮೇಲ್ವರ್ಗದವರಿಗೆ ನಡು ಉಳುಕಿದಾಗ ಅವರು ಕೆಳವರ್ಗದವರಿಂದ ಉಳುಕು ತೆಗೆಸಿಕೊಳ್ಳಲು ಹಿಂಜರಿಯುವುದನ್ನು ನೋಡಿದಾಗ ಜಾತೀಯತೆಯ ಪ್ರಭಾವ ಹೇಗಿತ್ತು ಎಂಬುದು ತಿಳಿದು ಬರುತ್ತದೆ.

'ಪರಿಸರದ ಕತೆ' ಕಥಾಸಂಕಲನದಲ್ಲಿ ಮೂಲಿಕೆ ಬಳ್ಳಿಯ ಸುತ್ತ ಎಂಬ ಕತೆಯಲ್ಲಿ ಒಂದು ಔಷಧಿ ಸಸ್ಯದ ಬಗ್ಗೆ ಪ್ರಸ್ತಾಪಿಸಿದ್ದಾರೆ. ಲೇಖಕರಿಗೆ ಪ್ರಕೃತಿಯನ್ನು ಔಷಧಿ

ಮೂಲವಾಗಿ ನೋಡುವುದು ತಿಳಿದಿತ್ತು ಎಂಬುದಕ್ಕೆ ಈ ಕತೆಯೇ ಸಾಕ್ಷಿ. ಇಲ್ಲಿ ಮೂಲಿಕೆ ಬಳ್ಳಿಯ ಬಗ್ಗೆ ತಿಳಿಯಲು ಲೇಖಕರೇ ಮಾಸ್ತ, ಭೈರ, ಅಪ್ಪಣ್ಣ, ಮಾರ ಮುಂತಾದವರೊಡನೆ ಕಾಡುತಿರುಗಿ ಅಲ್ಲಿನ ಹಲವಾರು ಗಿಡಮೂಲಿಕೆಗಳ ಬಗ್ಗೆ ತಿಳಿದುಕೊಳ್ಳುತ್ತಾರೆ.

ಹೀಗೆ ತೇಜಸ್ವಿ ಮನುಷ್ಯನ ಆಷಾಢಭೂತಿತನ, ಮೂಢನಂಬಿಕೆಗಳು, ಶೋಷಣೆಗಳು, ಸಭ್ಯತೆಯ ಸೋಗಿನ ಬಗೆಗೆ ಬಂಡಾಯ ಇವುಗಳನ್ನು ತಮ್ಮ ನಾಟಕ, ಕಥೆ, ಕಾದಂಬರಿಗಳಲ್ಲಿ ವಿವರಿಸಿದ್ದಾರೆ. ನಿಸರ್ಗ ಹಾಗೂ ನಾಗರೀಕತೆಗಳ ಸಹಜ ವಿಕಾಸಕ್ಕೊದಗಿದ ವಾತಾವರಣ, ಮಾನವ ಅಂತರಂಗದ ನಿಗೂಢರಹಸ್ಯ, ನಿಸರ್ಗ–ಸಮಾಜ, ವ್ಯಕ್ತಿಗಳ ಸಂಬಂಧ, ಮೌಢ್ಯ, ತತ್ವಜ್ಞಾನಗಳವರೆಗಿನ ಚಿಂತನೆಗಳು ಅವರ ಕೃತಿಗಳಲ್ಲಿ ವ್ಯಾಪಕವಾಗಿ ಹರಡಿವೆ.

ತುರ್ತುಪರಿಸ್ಥಿತಿಯ ಪೂರ್ವದಲ್ಲಿ ನವನಿರ್ಮಾಣ ಕ್ರಾಂತಿಯ ಕನಸು ಹೊತ್ತ ಬೃಹತ್ ಚಳವಳಿಯು 1973 ರಿಂದ ದೇಶದ ಎಲ್ಲೆಡೆ ವ್ಯಾಪಿಸಿತು. ಉತ್ತರ ಭಾರತದ ಸರ್ಕಾರಗಳು ಉರುಳಿದವು. ಕರ್ನಾಟಕದಲ್ಲಿ ಇದರ ತೀವ್ರತೆ ವ್ಯಾಪಕವಾಯಿತು. ಕರ್ನಾಟಕದ ನವ ನಿರ್ಮಾಣ ಚಳವಳಿಗೆ ತೇಜಸ್ವಿ ಎಂ.ಡಿ. ನಂಜುಂಡಸ್ವಾಮಿ, ದೇವನೂರು ಮಹಾದೇವ ಮುಂತಾದವರು ನೇತೃತ್ವ ವಹಿಸಿದ್ದರು. ಈ ಜನಾಂದೋಲನವನ್ನು ಅರಗಿಸಿಕೊಳ್ಳಲಾಗದ ಕೇಂದ್ರ ಸರ್ಕಾರ 1975 ರ ಜೂನ್ 25 ರಂದು ದೇಶದಲ್ಲಿ ತುರ್ತು ಪರಿಸ್ಥಿತಿ ಘೋಷಿಸಿತು. ಈ ರಾಜಕೀಯ ಬೆಳವಣಿಗೆಯಿಂದಾಗಿ ದೇಶದಾದ್ಯಂತ ಪ್ರಜಾಸತ್ತಾತ್ಮಕ, ಸಾಮಾಜಿಕ ವಿಚಾರಧಾರೆಗಳು ಮತ್ತಷ್ಟು ಹರಿತಗೊಂಡು ತುರ್ತುಪರಿಸ್ಥಿತಿಯ ವಿರುದ್ಧ ಬಹುದೊಡ್ಡ ಜನಜಾಗೃತಿಯ ಆಂದೋಲನಗಳನ್ನು ಕಟ್ಟುವ ನಿಟ್ಟಿನಲ್ಲಿ ಹೊಸ ಹೊಸ ಸಂಘಟನೆಗಳು ಹುಟ್ಟಿಕೊಂಡವು. ವಿಶೇಷವಾಗಿ ಕರ್ನಾಟಕದಲ್ಲಿ 1975 ರಲ್ಲಿ ದಲಿತ ಸಂಘರ್ಷ ಸಮಿತಿ ಜನ್ಮ ತಾಳಿತು. ಇದಕ್ಕೂ ಪೂರ್ವದಲ್ಲಿ ಮೈಸೂರಿನಲ್ಲಿ ಜಾತಿ ವಿನಾಶ ಸಮ್ಮೇಳನ ನಡೆದಿತು. ತುರ್ತುಪರಿಸ್ಥಿತಿಯ ನಂತರ ಭಾಷಾ ಚಳುವಳಿ, ರೈತ ಚಳವಳಿಗಳು ಹುಟ್ಟಿಕೊಂಡಿವು. ಹೀಗೆ ಸಾಮಾಜಿಕ ಕ್ರಾಂತಿಯ ಪರ್ವ ಕಾಲವೆಂದರೆ 80ರ ದಶಕ ಎಂದೇ ಹೇಳಬಹುದು. ಜಾತಿ ವಿನಾಶ, ಪ್ರಜಾಪ್ರಭುತ್ವ ಪರ ರಾಜಕೀಯ ಜಾಗೃತಿ, ಸಾಮಾಜಿಕ ಸಮಾನತೆಯ ಹೋರಾಟಗಳಿಗೆ, ಲೋಹಿಯಾ, ಕುವೆಂಪು, ಪೆರಿಯಾರ್, ಗಾಂಧಿ, ಅಂಬೇಡ್ಕರ್ ವಿಚಾರಧಾರೆಗಳು ಸೂಕ್ತ ಭೂಮಿಕೆಯೊನ್ನದಗಿಸಿದ್ದವು.

ಈ ಹಿನ್ನೆಲೆಯಲ್ಲಿ ತೇಜಸ್ವಿಯವರ ಬರವಣಿಗೆಯ ಸ್ವರೂಪ, ಆಶಯಗಳು ಬದಲಾದವು. ಕಲಾತ್ಮಕ ಸಣ್ಣಕತೆಗಳನ್ನು ಕೈಬಿಟ್ಟು, ವಿಸ್ತಾರವಾದ ಸಾಮಾಜಿಕ, ರಾಜಕೀಯ ವೈಚಾರಿಕ ನೆಲೆಗಳಲ್ಲಿ ತೇಜಸ್ವಿಯವರು 'ಕರ್ವಾಲೊ' ಕಾದಂಬರಿ ರಚನೆಯ ಮೂಲಕ ತಮ್ಮ

ಗದ್ಯಕ್ಕಿರುವ ಹೊಸ ಆಯಾಮಗಳನ್ನು ಕಂಡುಕೊಂಡರು. ನಂತರ ಚಿದಂಬರ ರಹಸ್ಯ, ಜುಗಾರಿ ಕ್ರಾಸ್, ಕಿರಗೂರಿನ ಗಯ್ಯಾಳಿಗಳು, ಕೃತಿಗಳು ಹೊರಬಂದವು.

ಈ ಸಂದರ್ಭದ ಬಹುಮುಖ್ಯ ಬೆಳವಣಿಗೆ ಎಂದರೆ ವ್ಯಷ್ಟಿ ಪ್ರಜ್ಞೆಯ ನೆಲೆಯಿರುವ ಕೃತಿ ರಚಿಸುತ್ತಿದ್ದ ತೇಜಸ್ವಿಯವರು, ಸಮಷ್ಟಿ ಪ್ರಜ್ಞೆ ಕಡೆಗೆ ತಮ್ಮ ಚಿಂತನೆಗಳ ಕ್ಷಿತಿಜಗಳನ್ನು ವಿಸ್ತರಿಸಿಕೊಂಡುದ್ದು. ಸಾಮಾಜಿಕ, ಸಮಾನತೆ, ಅದರ ಉನ್ನತಿಯಂಥ ಆದರ್ಶಗಳು 80ರ ದಶಕದ ಎಲ್ಲ ಆಂದೋಲನಗಳ ಮುಖ್ಯ ಕಾಳಜಿಗಳಾಗಿದ್ದವು. ಈ ದಶಕದ ಇಂತಹ ಸೂಕ್ಷ್ಮ ವಿದ್ಯಾಮಾನಗಳನ್ನು ಚೆನ್ನಾಗಿ ಗ್ರಹಿಸಿದ್ದ ತೇಜಸ್ವಿಯವರು ಅವುಗಳನ್ನೇ ತಮ್ಮ ಕಥಾ ಸಾಹಿತ್ಯದ ಮೂಲ ವಸ್ತು ವಿಷಯವನ್ನಾಗಿ ಆರಿಸಿಕೊಂಡರು. ಅದರಿಂದಾಗಿಯೇ ಆ ಕಾಲದ ವೈಚಾರಿಕ ಸಂಘರ್ಷಗಳ ಪ್ರತೀಕಗಳಂತೆ ಅವರ ಕಥಾ ಸಾಹಿತ್ಯ ಕಂಡು ಬರುತ್ತದೆ. ಈ ದೃಷ್ಟಿಯಿಂದ ಅವರ ಕೃತಿಗಳ ಸಾಹಿತ್ಯಕ, ರಾಜಕೀಯ, ಸಾಮಾಜಿಕ, ಸಾಂಸ್ಕೃತಿಕ ವಿಚಾರಗಳನ್ನು ವಿಶ್ಲೇಷಿಸಬೇಕಾಗುತ್ತದೆ.

* * * * *

---

1. ಪೂರ್ಣಚಂದ್ರ ತೇಜಸ್ವಿ, ಡಾ.ಎಚ್.ಎಂ.ಮಹೇಶ್ವರಯ್ಯ, ಪುಟ–48.

# ಅಧ್ಯಾಯ – ೩

## ತೇಜಸ್ವಿ ಕಥಾ ಸಾಹಿತ್ಯದ ಆಶಯಗಳು

ಈ ಅಧ್ಯಯದಲ್ಲಿ ತೇಜಸ್ವಿಯವರ ಕಥಾಸಾಹಿತ್ಯದ ಸಮಗ್ರ ನೋಟವನ್ನು ಒದಗಿಸಲು ಪ್ರಯತ್ನ ಮಾಡಲಾಗಿದೆ. ನೈಸರ್ಗಿಕ ವಿಕಾಸದಷ್ಟೇ ಸಾಮಾಜಿಕ ವಿಕಾಸವು ಮನುಷ್ಯರ ಔನ್ನತ್ಯಕ್ಕೆ ಕಾರಣವಾಗಬೇಕು ಎಂಬುದೇ ತೇಜಸ್ವಿ ಕಥಾ ಸಾಹಿತ್ಯದ ಆಶಯಗಳಾಗಿವೆ. ಇಲ್ಲಿ ತೇಜಸ್ವಿಯವರು ನಿಸರ್ಗ ಬದಲಾವಣೆಗೆ ಒಳಗಾದಂತೆ ಸಾಮಾಜಿಕ ಜೀವನ ನಡೆಸುತ್ತಿರುವ ಮಾನವ ಕೂಡ ಬದಲಾವಣೆಗೆ ಒಳಗಾಗಬೇಕು. ಆದರೆ ಆ ಬದಲಾವಣೆ ಅವನ ಉಳಿವಿಗಾಗಿರಬೇಕೆ ಹೊರತು ಅಳಿವಿಗಾಗಿ ಅಲ್ಲ.

'ನಿಗೂಢ ಮನುಷ್ಯರು' ಕಿರುಕಾದಂಬರಿಯಲ್ಲಿ ಜಗನ್ನಾಥ, ರಂಗಪ್ಪ, ಗೋಪಾಲಯ್ಯ, ಶಾರಿ, ಈ ಎಲ್ಲಾ ಪಾತ್ರಗಳು ತಮ್ಮೊಳಗೆ ತಾವು ನಿಗೂಢರಾಗಿರುವವರು. ಅಲ್ಲಿನ ನೈಸರ್ಗಿಕ ಜಗತ್ತಿನ ವಿಪ್ಲವಗಳಾದ ಭೂಕಂಪ, ಬಿರುಗಾಳಿ, ಮಳೆ, ಗುಡುಗು, ಮಿಂಚಿನ ಆರ್ಭಟದ ಒತ್ತಡದಲ್ಲಿ ಒಬ್ಬರಿಗೊಬ್ಬರೂ ಸಾಮಾಜಿಕವಾಗಿ ತಮ್ಮ ತಮ್ಮ ಸತ್ಯಗಳನ್ನು ತೆರೆದುಕೊಳ್ಳುವುದನ್ನು ಕಾಣುತ್ತೇವೆ.

ಅಲ್ಲಿರುವ ಅಸಂಖ್ಯಾತ ಗಿರಿಶ್ರೇಣಿಗಳಲ್ಲಿಯೇ ಚೂಪಾದ ಕೆಂಪಗೆ ಕಾಣುವ ಪರ್ವತದ ಶಿಖರವಿದ್ದು ಅದರ ಹೆಸರು ಉಗ್ರಗಿರಿ. ಆ ಗಿರಿಯು ಎಂಥದೆಂಬುದು ಅದರ ಹೆಸರಿನಲ್ಲಿಯೇ ಸೂಚಿತವಾಗಿದೆ. ಭಯಂಕರವಾಗಿ ಕಾಣುವ ಈ ಉಗ್ರಗಿರಿ ಯಾವಾಗ ಬೇಕಾದರೂ ಉರುಳಿ ಬಿದ್ದು ಗೋಪಾಲಯ್ಯನ ತೋಟವನ್ನು ಆವರಿಸಬಹುದು. ನಿಸರ್ಗದ ಮುಂದೆ ಮನುಷ್ಯನ ಹೋರಾಟ ನಿಲ್ಲಲು ಸಾಧ್ಯವಿಲ್ಲ. ಆದರೂ ಸಹ ಅವನು ಆ ನಿಸರ್ಗದಿಂದ ತನ್ನ ಸಾಮಾಜಿಕ ಜೀವನವನ್ನು ಬೇರೊಂದು ಕಡೆಗೆ ಕೊಂಡೊಯ್ಯಲು ಇಷ್ಟಪಡುವುದಿಲ್ಲ. ಅಂದರೆ ಇಲ್ಲಿ ನಿಸರ್ಗವು ಸಾಮಾಜಿಕವಾಗಿ ಉನ್ನತೀಕರಣಗೊಳ್ಳುವುದನ್ನು ಕಾಣಬಹುದು. ಗೋಪಾಲಯ್ಯ ಪ್ರಕೃತಿಯಲ್ಲಿ ಏನೇ ತೊಂದರೆ ಉಂಟಾದರೂ ಅಲ್ಲೇ ಇರುವ ನಿರ್ಧಾರವನ್ನು ಕೈಬಿಡುವುದಿಲ್ಲ.

'ಹುಲಿಯೂರಿನ ಸರಹದ್ದು' ಕತೆಯಲ್ಲಿ ಕತೆಯ ನಾಯಕ ಸೋಮು ಸಾಮಾಜಿಕ ವ್ಯವಸ್ಥೆಯ ದ್ಯೋತಕವಾದರೆ, ಅಲ್ಲಿ ಬರುವ ಗರುಡ ಪಕ್ಷಿ ಪ್ರಕೃತಿಯ ಪ್ರತೀಕವಾಗುತ್ತದೆ. ಪ್ರಕೃತಿಯ ಭಾಗವಾದ ಗರುಡನ ನಾಶದೊಂದಿಗೆ ಇಲ್ಲಿ ಸಮಾಜವು ಬದಲಾವಣೆ

ಹೊಂದಿ ಉನ್ನತೀಕರಣಗೊಳ್ಳುವುದನ್ನು ಕಾಣಬಹುದು. ನಿಸರ್ಗದ ಎಲ್ಲೆಯನ್ನು ದಾಟಿ ಸಾಮಾಜಿಕ ನೆಲೆಯನ್ನು ಕಂಡುಕೊಳ್ಳುವ ಸೋಮುವಿನ ಜೀವನವನ್ನು ಚಿತ್ರಿಸಿದ್ದಾರೆ.

ಕರ್ವಾಲೋ ಕಾದಂಬರಿಯ ನಿರೂಪಕ ಅರಣ್ಯದ ಪ್ರಾಕೃತಿಕ ಪರಿಸರದ ಮಧ್ಯೆ ಗದ್ದೆ–ತೋಟದ ವ್ಯವಸಾಯ ಮಾಡಿಕೊಂಡಿರುತ್ತಾನೆ. ಹದಗೆಡುತ್ತಿರುವ ಮಲೆನಾಡಿನ ವಾತಾವರಣ ಹಾಗೂ ವ್ಯವಸಾಯದಲ್ಲಿ ಉಂಟಾಗುತ್ತಿರುವ ಹಾನಿಗೆ ಬೇಸತ್ತು ಮನೆ, ತೋಟ, ಗದ್ದೆಗಳನ್ನು ಮಾರಿ ನಗರಕ್ಕೆ ವಲಸೆ ಹೋಗಬೇಕೆಂದು ಮನಸ್ಸು ಮಾಡುತ್ತಾನೆ. ಆಗ ಕೀಟಶಾಸ್ತ್ರಜ್ಞ ಹಾಗೂ ಸಸ್ಯ ವಿಜ್ಞಾನಿಯಾಗಿರುವ ಕರ್ವಾಲೊ ಪರಿಚಯವಾಗುತ್ತದೆ. ಭತ್ತದ ಬೆಳೆಗೆ ಬಂದ ರೋಗಕ್ಕೆ ನಿವಾರಣೆ ನೀಡುತ್ತಾರೆ. ಅದರಿಂದ ನಿರೂಪಕರಿಗೆ ಪರಿಹಾರ ದೊರೆತು ಅವರು ಅಲ್ಲಿಯೇ ನೆಲೆ ನಿಲ್ಲುತ್ತಾರೆ. ಇಲ್ಲಿ ನೈಸರ್ಗಿಕ ಹಾಗೂ ಸಾಮಾಜಿಕ ವಿಕಾಸವೂ ಮನುಷ್ಯರ ಉನ್ನತಿಗೆ ಕಾರಣವಾಗುವುದನ್ನು ಕಾಣಬಹುದು. ಕರ್ವಾಲೊ, ಎಂಕ್ಟ, ಮಂದಣ್ಣ, ಸಾಂಪ್ರದಾಯಕ ಸಾಮಾಜಿಕ ಮೌಲ್ಯಗಳನ್ನು ಧಿಕ್ಕರಿಸಿ ನಿಲ್ಲುತ್ತಾರೆ. ಇಲ್ಲಿ ನಿಸರ್ಗದ ಜೊತೆ ಸಾಮಾಜಿಕತೆ ಉನ್ನತಿ ಸಾಧಿಸುವುದನ್ನು ನಿರೂಪಕರ ಮೂಲಕ ಕಾಣಬಹುದು.

'ಚಿದಂಬರ ರಹಸ್ಯ' ಕಾದಂಬರಿಯಲ್ಲಿ ಗ್ರಾಮ ಜೀವನವೊಂದರ ವಿಘಟನೆಯನ್ನು ನಿರೂಪಿಸಲಾಗಿದೆ. ಈ ಕಾದಂಬರಿ ಒಂದು ಊರಿನ ಕಥೆಯಾಗದೆ, ಒಂದು ನಾಡಿನ ಕಥೆಯಾಗದೆ, ಒಂದು ಸಮಾಜದ ಕಥೆಯಾಗದೆ ಇಡೀ ರಾಷ್ಟ್ರದ ಅವನತಿಯ ಕಥೆಯಾಗಿದೆ. ಈ ಗ್ರಾಮದ ಏಲಕ್ಕಿಯ ತಳಿಗಳು ತುಂಬಾ ಪ್ರಸಿದ್ಧವಾಗಿವೆ. ಮಲೆನಾಡಿನ ಸುಂದರ ತಾಣಗಳಾದ ಕೆಸರೂರಿನಂತಹ ಸಮೃದ್ಧ ಅರಣ್ಯಗಳಿರುವ ಕಾಡಿನ ನಾಡುಗಳು ಆಧುನಿಕತೆಯ ಆಸೆಬುರುಕ ಕಂಟ್ರಾಕ್ಟರುದಾರರಿಗೆ ಬಲಿಯಾಗಿ, ಈಗ ಕಾಡಿನ ಸ್ಥಳದಲ್ಲಿ ಲಂಟಾನಾದ ಪೊದೆಗಳು ನಿಬಿಡವಾಗಿ ಬೆಳೆದು ನಿಂತಿವೆ. ಇಲ್ಲಿ ಆಧುನಿಕತೆಯ ದ್ಯೋತಕವಾಗಿ ಜ್ಯೂನಿಯರ್ ಕಾಲೇಜ್, ಏಲಕ್ಕಿ ಸಂಶೋಧನಾ ಕೇಂದ್ರ, ಸಹಕಾರಿ ಬ್ಯಾಂಕ್, ಬ್ಲಾಕ್‌ಡೆವಲಪ್‌ಮೆಂಟ್ ಆಫೀಸ್, ಪೋಲಿಸ್ ಸ್ಟೇಷನ್ ಮುಂತಾದವುಗಳಿವೆ. ಆದರೆ ಇಲ್ಲಿ ಸಾಮಾಜಿಕ ವಿಕಾಸವೂ ಆಗುತ್ತದೆ. ಆದರೆ, ಅಲ್ಲಿ ಸಾಮಾಜಿಕ ವಿಕಾಸದ ಜೊತೆಗೆ ನೈಸರ್ಗಿಕ ವಿಕಾಸವು ಅವನತಿಯ ಹಾದಿ ಹಿಡಿಯುವುದನ್ನು ನಾವು ಏಲಕ್ಕಿ ಬೆಳೆಯ ವಿನಾಶದಿಂದ ಕಾಣಬಹುದಾಗಿದೆ. ಏಲಕ್ಕಿ ಬೆಳೆ ನಿಸರ್ಗದಲ್ಲಿ ಅವನತಿ ಹಾದಿ ಹಿಡಿಯಿತೋ ಹಾಗೆಯೇ ಸಾಮಾಜಿಕ ವಿಕಾಸವು ಕೂಡ ಅವನತಿಯ ಹಾದಿ ಹಿಡಿದು ಅವಸಾನ ಹೊಂದುವುದನ್ನು ಕಾಣಬಹುದು.

'ಜುಗಾರಿಕ್ರಾಸ್' ಕಾದಂಬರಿಯು ಇಪ್ಪತ್ನಾಲ್ಕು ಗಂಟೆಗಳಲ್ಲಿ ನಡೆಯುವ ಕ್ರಿಯೆ. ಮಲೆನಾಡಿನ ಸುಂದರ ಚಿತ್ರಣಗಳು, ಮಹತ್ವದ ಸಂಗತಿಗಳು ಈ ಕಾದಂಬರಿಯ ಕಥಾ ಹಂದರಲ್ಲಿ ಸೇರಿಕೊಂಡಿವೆ. ಒಂದುರೀತಿಯಲ್ಲಿ ಚಿದಂಬರ ರಹಸ್ಯ ಕಾದಂಬರಿಯ ಮುಂದುವರಿಕೆಯಂತೆ ಕಾಣುವ ಈ ಕಾದಂಬರಿ ಕಾಡಿನ ನಾಶದ ಹಿಂದಿರುವ ಒಳಸಂಚಿನ ಕರಾಳ ಮುಖವನ್ನು ಪರಿಚಯಿಸುತ್ತಲೇ, ನಮ್ಮ ಸಮಾಜದ ಅವನತಿಯನ್ನು ಸೂಚಿಸುತ್ತದೆ. ಇಲ್ಲಿ ಸಮಾಜದ ವಿಕಾಸದಷ್ಟೇ ನಿಸರ್ಗಕೂಡ ಮುಂದುವರಿಯಬೇಕು. ಆದರೆ ಸಮಾಜದ ಅವನತಿ ನಿಸರ್ಗದ ಅವನತಿಯೊಂದಿಗೆ ಆಗುತ್ತದೆ.

'ಕಿರಗೂರಿನ ಗಯ್ಯಾಳಿಗಳು' ಕಥೆಯಲ್ಲಿ ಪುರುಷ ಪ್ರಧಾನ ವ್ಯವಸ್ಥೆಯ ಮೇಲೆ ಹೆಂಗಸರು ಸಿಡಿದೇಳುತ್ತಾರೆ. ಅದಕ್ಕೆ ಕಾರಣವಾಗಿ ಪ್ರಕೃತಿಯಲ್ಲಿನ ಒಂದು ಹೆಬ್ಬಲಸಿನ ಮರ ಬಿರುಗಾಳಿಗೆ ಬೀಳುವುದೇ ಕತೆಯ ಮೂಲವಸ್ತು. ಅದರ ಮೂಲಕ ನಿಸರ್ಗವು ಸಮಾಜದಲ್ಲಿ ತರುವ ಬದಲಾವಣೆಯನ್ನು ಗುರ್ತಿಸಬಹುದು. ಕುಬಿ ಮತ್ತು ಇಯಾಲ ಕಥೆಯಲ್ಲಿ ನಿಸರ್ಗದತ್ತವಾದ ಧೂಪದ ಬಂಡೆ ಅದರ ಹಿಂದೆ ನಡೆಯುವ ಇಯಾಲಳ ಸಾವನ್ನು ನಾವು ಅಲ್ಲಿ ಕಾಣಬಹುದು. ಇಲ್ಲಿ ಸಮಾಜದ ಚಲನವಲನಗಳನ್ನು ಅತ್ಯಂತ ಸೂಕ್ಷ್ಮವಾಗಿ ಗ್ರಹಿಸುವ ಲೇಖಕರು ಪಾತ್ರಗಳ ಮೂಲಕ ಉನ್ನತಿ ಮತ್ತು ಅವನತಿಯನ್ನು ಕುಬಿ ಮತ್ತು ಇಯಾಲದಲ್ಲಿ ತರುತ್ತಾರೆ. ಬಂಡೆಯ ಪ್ರಕೃತಿ ದತ್ತವಾಗಿದ್ದು, ಅವಳ ಸಾವಿಗೆ ಆ ಬಂಡೆಯೇ ಕಾರಣವಾಗಿ ನಿಲ್ಲುತ್ತದೆ.

'ಕೃಷ್ಣೇಗೌಡನ ಆನೆ' ಕಥೆಯಲ್ಲಿ ಸಾಮಾಜಿಕತೆ ಮತ್ತು ಪ್ರಕೃತಿ ಎರಡನ್ನು ನೋಡಿದಾಗ ಇಲ್ಲಿ ಪ್ರಕೃತಿಯ ಒಂದಂಶವಾಗಿ ಆನೆ, ಸಾಮಾಜಿಕವಾಗಿ ಅಲ್ಲಿನ ಜನ ಕಂಡುಬರುತ್ತಾರೆ ಹಾಗೂ ಕಾಡಿನಲ್ಲಿ ಕಳ್ಳನಾಟ ಸಾಗಿಸುವ ದಂಧೆ ಸಮಾಜದಲ್ಲಿ ಏನೇ ನಡೆದರೂ ಅದಕ್ಕೆ ಆನೆಯೇ ಕಾರಣ ಎಂದು ಎಲ್ಲಾ ತಪ್ಪುಗಳನ್ನು ಆನೆಯ ಮೇಲೆಯೇ ಹೊರಿಸಲಾಗುತ್ತದೆ. ಸಾಮಾಜಿಕವಾಗಿ ಉನ್ನತೀಕರಣಗೊಳ್ಳುತ್ತಿದ್ದ ಮಾನವ ಇಲ್ಲಿ ತನ್ನ ಎಲ್ಲಾ ತಪ್ಪುಗಳನ್ನು ಪ್ರಕೃತಿಯ ಒಂದು ಭಾಗವಾದ ಆನೆ ಮೇಲೆ ಹಾಕುತ್ತಾನೆ. ಇಲ್ಲಿ ಮಾನವ ಪ್ರಕೃತಿಯನ್ನು ತನ್ನ ಸ್ವಾರ್ಥಕ್ಕೆ ಉಪಯೋಗಿಸುವ ಚಿತ್ರಣವಿದೆ.

ಹೀಗೆ ನೈಸರ್ಗಿಕ ವಿಕಾಸದಷ್ಟೇ ಸಾಮಾಜಿಕ ವಿಕಾಸವೂ ಮನುಷ್ಯನ ಔನ್ನತ್ಯಕ್ಕೆ ಕಾರಣವಾಗುವ ಆಶಯಗಳನ್ನು ತೇಜಸ್ವಿ ಕಥಾ ಸಾಹಿತ್ಯ ಒಳಗೊಂಡಿರುವುದನ್ನು ಕಾಣಬಹುದು.

ಅವರ ಕಥಾ ಸಾಹಿತ್ಯವೆಲ್ಲವೂ ಆಧುನಿಕತೆಯನ್ನು ಒಪ್ಪಿಕೊಂಡು, ಅದನ್ನು ಸರಿಯಾದ ರೀತಿಯಲ್ಲಿ ಬಳಸಿಕೊಳ್ಳಬೇಕು. ಇಲ್ಲದಿದ್ದರೆ ಇಡೀ ಸಮುದಾಯ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ ಅವನತಿ ಹೊಂದಿ ಇಡೀ ಒಂದು ಸಮುದಾಯವನ್ನೇ ಬಲಿ ತೆಗೆದುಕೊಳ್ಳುತ್ತದೆ. ಆಗಾಗಿ ಅವರು ಆಧುನಿಕತೆಯ ಪ್ರವೇಶವನ್ನು ಒಂದು ಸಮುದಾಯ ಹೇಗೆ ಸ್ವೀಕರಿಸಬೇಕು ಜೊತೆಗೆ ಅದನ್ನು ಬೆಳೆಸುವತ್ತಾ ಹೇಗೆ ಪ್ರಯತ್ನಿಸಬೇಕೆಂಬುದನ್ನು ಅವರು ತಮ್ಮ ಕಥಾ ಸಾಹಿತ್ಯದಲ್ಲಿ ಕಟ್ಟಿಕೊಟ್ಟಿದ್ದಾರೆ.

ಇವರ ಕಾದಂಬರಿಗಳಲ್ಲಿ, ಕಥೆಗಳಲ್ಲಿ ಬರುವ ಗೊಂದಲಗೇರಿ, ಕಿರಗೂರು, ಕೆಸರೂರು, ಜುಗಾರಿ ಕ್ರಾಸ್, ಈ ಹೆಸರುಗಳೇ, ಅವನತಿಯ ಪ್ರತೀಕವಾಗುತ್ತವೆ. ಈ ಊರುಗಳಲ್ಲಿನ ಜನ ಆಧುನಿಕತೆಗೆ ಸಿಲುಕಿ ಅದನ್ನು ಉಪಯೋಗಪಡಿಸಿಕೊಳ್ಳುವ ಬದಲು ದುರುಪಯೋಗ ಪಡಿಸಿಕೊಂಡು ಅವನತಿ ಹಾದಿಯನ್ನು ಹಿಡಿಯುತ್ತಾರೆ. ಆದರೆ ಚಿದರಂಬರ ರಹಸ್ಯದ ಕೆಸರೂರು ಸಂಪೂರ್ಣವಾಗಿ ಆಧುನಿಕತೆಯ ದಾಳಿಗೆ ಸಿಕ್ಕಿ ಜನರ ಸ್ವಾರ್ಥದಿಂದ ಬಲಿಪಶುವಾಗುತ್ತದೆ. ಹಾಗಾಗಿ ಪ್ರಕೃತಿಯನ್ನು ದುರುಪಯೋಗ ಪಡಿಸಿಕೊಳ್ಳದೇ ಅದನ್ನು ಉಪಯೋಗಪಡಿಸಿಕೊಳ್ಳಬೇಕೆಂಬ ಆಶಯವನ್ನು ಅವರ ಕಥಾ ಸಾಹಿತ್ಯ ಹೊಂದಿದೆ. ಅಲ್ಲಿ ಆಧುನೀಕತೆಯನ್ನು ವಿನಾಶಕ್ಕೆ ಬಳಸಿಕೊಳ್ಳಬಾರದೆಂಬ ಸಂದೇಶ ಅವರ ಕಥಾ ಸಾಹಿತ್ಯದಲ್ಲಿದೆ.

ಮನುಷ್ಯ ಪ್ರಕೃತಿಯ ಒಂದು ಭಾಗವೆಂದು ತಿಳಿದು ಜೀವಿಸಬೇಕು ಪ್ರಕೃತಿಯನ್ನು ತನ್ನ ಸ್ವಾರ್ಥಕ್ಕಾಗಿ ನಾಶ ಮಾಡಬಾರದು. ಇಲ್ಲಿ ಪ್ರಕೃತಿ ನಾಶವಾದರೆ ಮನುಷ್ಯ ಕೂಡ ನಾಶ ಹೊಂದುತ್ತಾನೆ ಎಂಬ ಸಾರ್ವಕಾಲಿಕ ಸತ್ಯದ ದರ್ಶನ ಮಾಡಿಸುತ್ತಾರೆ ತೇಜಸ್ವಿಯವರು.

******

# ಅಧ್ಯಾಯ-೪

## ಕಥಾ ಸಾಹಿತ್ಯದಲ್ಲಿ ಪ್ರಕೃತಿಯ ಪಾತ್ರ

ತೇಜಸ್ವಿ ಕನ್ನಡದ ಅತ್ಯುನ್ನತ ಬರಹಗಾರರಲ್ಲಿ ಒಬ್ಬರಾಗಿದ್ದಾರೆ. ನವೋದಯ, ನವ್ಯ – ನವ್ಯೋತ್ತರ ಕಾಲಘಟ್ಟಗಳ ನಡುವೆ ತಮ್ಮದೇ ಆದ ವಿಶಿಷ್ಟ ಅಭಿವ್ಯಕ್ತಿ ಕ್ರಮವನ್ನು ರೂಢಿಸಿಕೊಂಡವರು. ಇವರ ಕಥಾಸಾಹಿತ್ಯಗಳೆಲ್ಲವೂ ದಲಿತ-ಬಂಡಾಯದ ಸಾಮಾಜಿಕ ಕಳಕಳಿಯನ್ನು ರೂಢಿಸಿಕೊಂಡು ಬಂದಿವೆ. ದಲಿತ ಬಂಡಾಯದ ಮುಖ್ಯ ಗುರಿ ಹೋರಾಟ. ಆ ಹೋರಾಟವನ್ನು ಚಿದಂಬರ ರಹಸ್ಯ, ಜುಗಾರಿಕ್ರಾಸ್ ಇಲ್ಲೆಲ್ಲಾ ಕಾಣಬಹುದಾಗಿದೆ.

ತೇಜಸ್ವಿ ತಾವು ವಾಸಿಸುತ್ತಿದ್ದ ಪರಿಸರದಲ್ಲಿನ ಪ್ರಾಣಿ, ಪಕ್ಷಿ, ಗಿಡ-ಮರ, ಬೆಟ್ಟ-ಗುಡ್ಡ, ನದಿ-ಝರಿ ಇವುಗಳ ಜೊತೆಗೆ ಮಾನವನ ಸಾಮಾಜಿಕ, ಆರ್ಥಿಕ, ರಾಜಕೀಯ, ಧಾರ್ಮಿಕ ಜೀವನವನ್ನು ಕಟ್ಟಿಕೊಟ್ಟಿದ್ದಾರೆ. ತೇಜಸ್ವಿ ಕಥಾಸಾಹಿತ್ಯದಲ್ಲಿ ಪ್ರಕೃತಿಯ ಪಾತ್ರವು 'ಕರ್ವಾಲೋ' ಕಾದಂಬರಿಯಲ್ಲಿ ಜೀವವಿಕಾಸದ ರೂಪದಲ್ಲಿ ಚಿತ್ರಿತವಾಗಿದೆ. ಶತಶತಮಾನ 'ಗಳಿಂದ ಜೀವಿಸಿಕೊಂಡು ಬಂದಿರುವ 'ಹಾರುವ ಓತಿ' ಹೇಗೆ ಕಾಲಾನಂತರದಲ್ಲಿ ರೆಕ್ಕೆಗಳನ್ನು ಮೂಡಿಸಿಕೊಳ್ಳುತ್ತಾ ಬಂತು ಎಂಬುದನ್ನು ಜೀವವಿಕಾಸ ಹಿನ್ನೆಲೆಯಲ್ಲಿ ವಿವರಿಸಲಾಗಿದೆ. ಇಲ್ಲಿ ಬರುವ ಮಂದಣ್ಣ ಅವಿದ್ಯಾವಂತ. ಅವನಿಗೆ ಪ್ರಕೃತಿಯ ಗಿಡ-ಮರ, ಪ್ರಾಣಿ-ಪಕ್ಷಿ, ಜೇನಿನ ವಿಧಗಳು ಇವೆಲ್ಲವನ್ನು ತಿಳಿದು ಜನಪದ ವಿಜ್ಞಾನಿಯಂತೆ ಪ್ರಕೃತಿಯ ನಡುವೆ ಬದುಕುತ್ತಿರುವ ಕಾರಣ ಅವನಿಗೆ ಪ್ರಕೃತಿ ರಹಸ್ಯಮಯವಾಗಿ ಕಾಣುವುದೇ ಇಲ್ಲ. ಅನ್ವೇಷಕರಾದ, ವಿದ್ಯಾವಂತರಾದ ಕರ್ವಾಲೊಗೆ ಪ್ರಕೃತಿ ಅದೇ ವಿವರಗಳು ಮಂದಣ್ಣನಷ್ಟು ಸರಳ-ಸುಲಭವಲ್ಲ. ಒಮ್ಮೆ ನಿರೂಪಕ ನಿಮ್ಮ ಊರಿನ ಕಡೆ ಬರಬೇಕು ಎಂದು ತಿಳಿಸಿದಾಗ ಮಂದಣ್ಣ ಅಲ್ಲೇನಿದೆ ನಿತ್ಯ ನೋಡುವ ಬೆಟ್ಟ-ಗುಡ್ಡ, ಮರ-ಝರಿ, ಹಸಿರು, ಪ್ರಾಣಿ-ಪಕ್ಷಿ, ಹುಳು-ಹುಪ್ಪಟೆ ಎಂದು ಹೇಳುವಂತಹ ಸಂದರ್ಭವನ್ನು ಕಾಣಬಹುದು. ಅಂದರೆ ಅದು ಮಂದಣ್ಣನಿಗೆ ನಿತ್ಯ ಕಣ್ಣಿಗೆ ಕಾಣುವ ಒಂದು ನೋಟವಾಗಿದ್ದು, ಅದರಲ್ಲಿ ಮಂದಣ್ಣನಿಗೆ ಆಸಕ್ತಿಯಾಗಲಿ, ಕುತೂಹಲವಾಗಲಿ, ನಿಗೂಢತೆಗಳಾಗಲಿ, ಕಾಣುವುದಿಲ್ಲ. ಏಕೆಂದರೆ ಅದು ಮಂದಣ್ಣನಿಗೆ ನಿತ್ಯದ ನೋಟವಾಗಿರುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಏಲಕ್ಕಿ ಬೆಳೆಗೆ ಬಂದಿರುವ ಕಾಯಿಲೆಯನ್ನು, ಅದಕ್ಕೆ ಪರಿಹಾರವನ್ನು ಪತ್ತೆಹಚ್ಚುವುದನ್ನು ಕಾಣುತ್ತೇವೆ. ಇಲ್ಲಿ ಏಲಕ್ಕಿ ಬೆಳೆಗೆ ಬರುವ

ಕಾಯಿಲೆಯಿಂದ ಏಲಕ್ಕಿ ಬೆಳೆಗಾರರು, ಕಳ್ಳಕಾಕರು, ಸಾಮಾಜಿಕವಾಗಿ ಅಲ್ಲಿ ವಾಸಮಾಡುವ ಜನರೆಲ್ಲಾ ಒಟ್ಟಾಗುತ್ತಾರೆ. ಇಲ್ಲಿ ಏಲಕ್ಕಿ ಬೆಳೆಗೆ ಬರುವ ಕಾಯಿಲೆಯಿಂದ ಏಲಕ್ಕಿ ಬೆಲೆ ಕುಸಿತಗೊಳ್ಳುತ್ತದೆ. ಪ್ರಕೃತಿ, ಆಧುನಿಕ ಜಗತ್ತಿನ ಯುವಕರು, ಕಳ್ಳಕಾರರು, ರಾಜಕೀಯ ವ್ಯಕ್ತಿಗಳು ಸಾಮಾಜಿಕವಾಗಿ ಅಲ್ಲಿ ವಾಸ ಮಾಡುವ ಜನರೆಲ್ಲಾ ಕಾರಣರಾಗುತ್ತಾರೆ. ಇಲ್ಲಿ ಪ್ರಕೃತಿಯ ನಾಶ ಅಥವಾ ಮಾನವನ ನಾಶ ಎರಡನ್ನು ಒಟ್ಟಾಗಿ ಧ್ವನಿತವಾಗಿದೆ. ಅಂದರೆ ಪ್ರಕೃತಿ ನಾಶವಾದರೆ ಅಲ್ಲಿ ಮಾನವನ ನಾಶ ಸಂಭವಿಸುತ್ತದೆ ಎಂಬ ವಸ್ತು ಸತ್ಯ ಮನದಟ್ಟಾಗುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ನಿಗೂಢತೆ ಮತ್ತು ಕುತೂಹಲಗಳು ಕೇಂದ್ರಭಿತ್ತಿಯಾಗಿವೆ. ಇವೇ ತೇಜಸ್ವಿ ಬರವಣಿಗೆಯ ಹಿಂದಿರುವ ಕಲಾಭಿವ್ಯಕ್ತಿ. ನಿಗೂಢತೆಯನ್ನು ಭೇದಿಸುತ್ತಾ ಹೋದಂತೆ ಅಲ್ಲಿ ಸಮಸ್ಯೆಗಳು ಉಲ್ಬಣವಾಗುತ್ತಾ ಹೋಗುತ್ತವೆ.

ನಿಗೂಢ ಮನುಷ್ಯರು ಕಿರುಕಾದಂಬರಿಯ ಗೋಪಾಲಯ್ಯ ಮಲೆನಾಡಿನ ಪರಿಸರದಲ್ಲಿದ್ದವನು, ಅವನ ಪರಿಸರದ ಉಗ್ರಗಿರಿ ಕುಸಿದು ತನ್ನ ತೋಟವೆಲ್ಲಾ ನಾಶ ಹೊಂದಿದರೂ ಸಹ ಅವನು ಆ ಮಲೆನಾಡನ್ನು ಬಿಟ್ಟು ಬರಲು ತಯಾರಿರುವುದಿಲ್ಲ. ಅಲ್ಲಿ ತೋಟದ ರಕ್ಷಣೆಗಾಗಿ ಗೋಪಾಲಯ್ಯ ಅಲ್ಲಿನ ನಿಸರ್ಗದ ಜೊತೆ ಹೋರಾಟ ಆರಂಭಿಸಿದ್ದಾನೆ. ಪರಿಸರದ ಜೊತೆ ಗೋಪಾಲಯ್ಯ ಹೊಂದಿದ ಅನುಬಂಧ ಅದನ್ನು ಬಿಟ್ಟು ಬರಲು ಸಾಧ್ಯವಿಲ್ಲದ ಮನಸ್ಥಿತಿಯನ್ನು ಸೂಚಿಸುತ್ತದೆ. ಇದೇ ಕಾದಂಬರಿಯ ಜಗನ್ನಾಥ ವಿದ್ಯಾವಂತ, ಸರ್ಕಾರಿ ನೌಕರಿಯಲ್ಲಿದ್ದವನು. ನೌಕರಿ ಬಿಟ್ಟು ಮಲೆನಾಡಿಗೆ ಜಮೀನುಕೊಳ್ಳಲು ಆಸಕ್ತನಾಗಿ ಬರುವುದು, ಅಂದರೆ ಅಲ್ಲಿ ಜಗನ್ನಾಥ ಪ್ರಕೃತಿಯೊಂದಿಗೆ ಸಂಬಂಧ ಕಟ್ಟಿಕೊಳ್ಳಲು ಬರುತ್ತಾನೆ. ಅವನು ಆ ರೀತಿ ಬರಲು ಕಾರಣ ಜಗನ್ನಾಥ ಅಧ್ಯಾಪಕನಾಗಿ, ಸಾಹಿತಿಯಾಗಿ, ಬದುಕು ನಿಸ್ಸಾರ, ನಿರುಪಯುಕ್ತ ಎನಿಸಿ ಆತ್ಮಹತ್ಯೆಯಂತಹ ಭಯಾನಕ ಆಲೋಚನೆಯಿಂದ ತಪ್ಪಿಸಿಕೊಳ್ಳಲು ಅವನು ಪ್ರಕೃತಿಯನ್ನು ಅಪ್ಪಿಕೊಳ್ಳುವುದನ್ನು ಕಾಣುತ್ತೇವೆ.

ನಿಗೂಢ ಮನುಷ್ಯರಲ್ಲಿ ಗೋಪಾಲಯ್ಯ ನಿಸರ್ಗದ ಜೊತೆ ಹೋರಾಟ ಆರಂಭಿಸಿದ್ದಾನೆ. ಅದನ್ನು ನೋಡಿದ ಜಗನ್ನಾಥ 'ನಿಮಗೆ ಹುಚ್ಚುಹಿಡಿದಿದೆ. ಗೋಪಾಲಯ್ಯ 'ದಯವಿಟ್ಟು ಬನ್ನಿ, ನಿಮ್ಮ ತೋಟ ಹೇಗಿದ್ದರೂ ಉಗ್ರಗಿರಿಯಿಂದ ನಾಶವಾಗಿದೆ, ಇಲ್ಲೇನು ಕೆಲಸ ಮಾಡುತ್ತೀರಿ ? ಎಂದಾಗ ಗೋಪಾಲಯ್ಯ 'ನಾನು ಆತ್ಮ ವಂಚನೆ ಮಾಡಿಕೊಳ್ಳುವುದಿಲ್ಲ, ಇಲ್ಲಿ ನಾನು ಚೂರುಚೂರಾದ ಬದುಕಿನಿಂದ ಬದುಕಿದ್ದೇನೆ. ನೀವು ಕ್ರಮವಾಗಿ ಹೋಗಿ

ಊರನ್ನು ತಲುಪಿ' ಎಂದು ಹೇಳಿ ಗೋಪಾಲಯ್ಯ ಅನುಭವ ಹುಡುಕಿಕೊಂಡು ಪ್ರಕೃತಿಯ ಕರಾಳ ರಹಸ್ಯಗಳಿಗೆ ಹೆದರಬಾರದು ಎನ್ನುವ ಅದ್ಭುತತೆಯನ್ನು ಈ ಕಾದಂಬರಿ ಕಟ್ಟಿಕೊಡುತ್ತದೆ. ಅಲ್ಲಿ ಗೋಪಾಲಯ್ಯ ಪ್ರಕೃತಿಯ ಜೊತೆ ಹೊಂದಿರುವ ಅನ್ಯೋನ್ಯ ಸಂಬಂಧದಿಂದ ಅವನು ಬಿಡುಗಡೆ ಪಡೆಯಲು ಇಷ್ಟಪಡುವುದಿಲ್ಲ.

ಕರ್ವಾಲೋ ಕಾದಂಬರಿಯಲ್ಲಿ ಬರುವ ಪುಂಗಿಯ ಎಂಕ್ಟ ಇವನು ನಿಸರ್ಗದಲ್ಲಿರುವ ಹಾವುಗಳು ಬೇಕೋ, ಇಲ್ಲವೋ, ಆದರೆ ಹಾವುಗಳಿಗೆ ಎಂಕ್ಟ ಕೂಗಿದಾಗ ಬರಲು ಸಿದ್ಧವಾಗಿವೆ. ಅಂದರೆ ಅವನು ಪ್ರಕೃತಿಯ ಹಾವುಗಳನ್ನು ಹೇಗೆ ಮರಳು ಮಾಡಬೇಕೆಂದು ಬಲ್ಲವನಾಗಿದ್ದನು.

ತೇಜಸ್ವಿಯ ಮತ್ತೊಂದು ಕತೆ 'ಅವನತಿ', ಇಲ್ಲಿ ಸುರಾಚಾರಿ ಎಂಬ ಶಿಲ್ಪಿ ಇರುತ್ತಾನೆ. ಇವನ ಕಲೆಗೆ ಸರಿಯಾದ ಬೆಲೆ ಆ ಊರಿನಲ್ಲಿ ದೊರೆತಿರುವುದಿಲ್ಲ, ಅಪ್ರತಿಮ ಸುಂದರಿಯಾದ ಗೌರಿ ಎಂಬುವವಳಿಗೆ ಮೂರು-ನಾಲ್ಕು ಮಕ್ಕಳಾದರೂ ಅವು ಸಾವನ್ನು ಅಪ್ಪುತ್ತಿರುತ್ತವೆ. ಆಗ ಸೂರಾಚಾರಿ ಅದು ಅವಳ ದೇಹದಲ್ಲಿರುವ ತೊಂದರೆ ಇದಕ್ಕೆ ಕಾರಣ ಎಂದು ಭಾವಿಸಿ ಅವಳನ್ನು ವಿಕಾರ ಮಾಡಲು ಹೊರಡುವ ವಿಪರ್ಯಾಸವು ನಡೆಯುತ್ತದೆ. ಇಲ್ಲಿ ತೇಜಸ್ವಿ ಹಳ್ಳಿಯ ಪರಿಸರದಲ್ಲಿ ಅವಕಾಶವಿಲ್ಲದೆ ಕಮರಿ ಹೋಗುತ್ತಿರುವ ಕಲಾವಂತಿಕೆ ಹಾಗೂ ಸೌಂದರ್ಯದ ದುರಂತ ಚಿತ್ರಣವನ್ನು ಅವನತಿ ಕತೆಯಲ್ಲಿ ಕಟ್ಟಿಕೊಟ್ಟಿದ್ದಾರೆ.

* * * * *

# ಅಧ್ಯಾಯ-೫

## ಪ್ರಕೃತಿ ಪಾತ್ರದ ಸಾರ್ಥಕತೆಯ ವಿಶ್ಲೇಷಣೆ

ತೇಜಸ್ವಿಯವರ ಕಥಾಸಾಹಿತ್ಯದ ಕೇಂದ್ರಬಿಂದು 'ಪರಿಸರ ಪ್ರಜ್ಞೆ'ಯಾಗಿದೆ. ಪರಿಸರವೇ ಅವರ ಕಥಾಸಾಹಿತ್ಯದ ವಸ್ತುವಾಗಿದೆ ಎಂದರೆ ತಪ್ಪಾಗಲಾರದು. ಪ್ರಕೃತಿಯು ಹೇಗೆ ಸಾರ್ಥಕತೆಯನ್ನು ಹೊಂದಿದೆ ಎಂಬುದನ್ನು, ಪ್ರಕೃತಿ ಮತ್ತು ಮಾನವ, ಪ್ರಕೃತಿ ಮತ್ತು ಸಮಾಜ, ಪ್ರಕೃತಿ ಮತ್ತು ವೈಚಾರಿಕತೆ, ಪ್ರಕೃತಿ ಮತ್ತು ಆರ್ಥಿಕತೆ, ಪ್ರಕೃತಿ ಮತ್ತು ಧರ್ಮ, ಪ್ರಕೃತಿ ಮತ್ತು ವಿಜ್ಞಾನ, ಪ್ರಕೃತಿ ಮತ್ತು ರಾಜನೀತಿ, ಪ್ರಕೃತಿ ಮತ್ತು ಸೌಂದರ್ಯ, ಪ್ರಕೃತಿ ಮತ್ತು ತತ್ವಶಾಸ್ತ್ರ, ಪ್ರಕೃತಿ ಮತ್ತು ಸಂಸ್ಕೃತಿ ಇವುಗಳ ನಡುವೆ ಇರುವ ಸಾವಯವ ಸಂಬಂಧಗಳಲ್ಲಿ ಗುರುತಿಸಬಹುದು.

### ಅ) ಪ್ರಕೃತಿ ಮತ್ತು ಮಾನವ:

ತೇಜಸ್ವಿ ಕಥಾಸಾಹಿತ್ಯದಲ್ಲಿ ಪ್ರಕೃತಿಯ ಒಂದು ಭಾಗವಾಗಿ ಮಾನವ ಕಂಡುಬರುತ್ತಾನೆ. ಕುತೂಹಲದ ಕಣ್ಣುಗಳಿಂದ ಪರಿಸರವನ್ನು ವೀಕ್ಷಿಸುವ ಮನುಷ್ಯನು ತೇಜಸ್ವಿಯವರ ಈ ಸಕಲ ಪ್ರಪಂಚದ ಒಂದು ಭಾಗ.

'ಚಿದಂಬರ ರಹಸ್ಯ ಕಾದಂಬರಿಯು ಇಡೀ ಒಂದು ಕೆಸರೂರಿನ ಪರಿಸರ, ಇಡೀ ಒಂದು ಮಾನವ ಪರಿಸರ, ಪ್ರಾಣಿಪರಿಸರ ಎಲ್ಲವನ್ನು ಒಳಗೊಂಡಿದೆ. ಅಂದರೆ ಇಲ್ಲಿನ 'ಸಮಾಜ' ಎಂದರೆ ಕೇವಲ ಮಾನವ-ಮಾನವನ ನಡುವಿನ ಸಮಾಜವಲ್ಲ. ಅದು ಮಾನವನ ಸ್ವನಿರ್ಮಿತ ಸಮಾಜ ಮತ್ತು ಪ್ರಕೃತಿಯ ನಡುವಿನ ಸಂಬಂಧದಿಂದ ಉಂಟಾದ ಪರಿಸರ. ಇಲ್ಲಿ ಏಲಕ್ಕಿಗೆ ಬರುವ ಕಾಯಿಲೆ ಕೇವಲ ಏಲಕ್ಕಿಗೆ ಬಂದಿದ್ದಲ್ಲ. ಇಡೀ ಮಾನವ ಬದುಕಿಗೆ ಬಂದಿದ್ದು. ಕಣ್ಣಿಗೆ ಕಾಣದ ಯಾವುದೇ ಒಂದು ನಮ್ಮ ಒಟ್ಟು ಬದುಕನ್ನು ಬಾಧಿಸುತ್ತಾ ಇದೆ. ಅಲ್ಲಿ ಏಲಕ್ಕಿಗೆ ಬರುವ ರೋಗ ಯಾವುದು? ಮೂಲ ಏನು? ಏಕೆ? ಎಂದು ಪ್ರಶ್ನೆ ಮಾಡುತ್ತಾ ಹೋದಂತೆ ಅಲ್ಲಿ ಘಟಿಸುವ ಎಲ್ಲಾ ಘಟನೆಗಳಿಗೂ ಮಾನವನ ಸ್ವಾರ್ಥವೇ ಕಾರಣವಾಗುವುದನ್ನು ಕಾಣಬಹುದು. ಇಲ್ಲಿ ಮನುಷ್ಯ, ಮನುಷ್ಯನನ್ನು, ಮನುಷ್ಯನೆಂದು ಭಾವಿಸದೇ ಜಾತಿ, ಧರ್ಮ, ರಾಜಕೀಯ ಇವುಗಳಿಂದ ಎಷ್ಟು ಸಮಸ್ಯೆಗಳನ್ನು ಸೃಷ್ಟಿಸಿದ್ದಾನೆ, ಆ ಸಮಸ್ಯೆಯಿಂದ ಯಾರೂ ಕೂಡ ಹೊರ ಬರುವ ಪ್ರಯತ್ನ ನಡೆಸದೆ ತಾವು ಸೃಷ್ಟಿಸಿದ ಪರಿಸರದಲ್ಲಿ ತಾವೇ ತಮ್ಮ ಅಸ್ತಿತ್ವದ ಅಂತ್ಯವನ್ನು ಕಾಣುವುದನ್ನು ಕಾದಂಬರಿಯ ಕೊನೆಯಲ್ಲಿ ಕಾಣಬಹುದು.

ಅಂದರೆ ವ್ಯಕ್ತಿತ್ವದ ಅಪಜಯವನ್ನು ಒಪ್ಪಿಕೊಂಡ ವ್ಯಕ್ತಿ ಸತ್ಯಾನ್ವೇಷಣೆಯ ಶೋಧಕನಾಗುತ್ತಾನೆ. ವ್ಯಕ್ತಿ ಮತ್ತು ಪರಿಸರದ ಮಧ್ಯದ ಅಮೂರ್ತದ ಸಂಬಂಧ ಮುಂದುವರಿಯುತ್ತದೆ. ಇದನ್ನು ಅಂಗಾಡಿ ಮತ್ತು ಜಯರಾಂರ ವ್ಯಕ್ತಿತ್ವದಲ್ಲಿ ಕಾಣಬಹುದು. ಇಲ್ಲಿ ಅಂಗಾಡಿಗೆ ಬದಲಾವಣೆ ಎಂಬುದೇ ಸಾಧ್ಯವಾಗುವುದೇ ಇಲ್ಲ. ಜಯರಾಂ ಜೀವನ ಸೃಷ್ಟಿಯ ನಿಗೂಢವನ್ನು ಅರ್ಥೈಸಿಕೊಂಡು ತನ್ನ ಅಸ್ತಿತ್ವವನ್ನು ಕಂಡುಕೊಳ್ಳುತ್ತಾನೆ.

'ಕರ್ವಾಲೊ' ಕಾದಂಬರಿಯಲ್ಲಿ ಬರುವ ಮಂದಣ್ಣ ಕೆಳವರ್ಗದಿಂದ ಬಂದವನು. ಅವನಿಗೆ ಪ್ರಕೃತಿಯ ಜೇನು ಸಾಕಣೆಯಲ್ಲಿ ಪರಿಣತಿ ಪಡೆದಿದ್ದವನು. ಜೊತೆಗೆ ಯಾವ ಯಾವ ಜಾತಿಯ ಜೇನುಗಳು ಎಂಬುದನ್ನು ಬಲ್ಲವನಾಗಿದ್ದನು. ಪ್ರಕೃತಿಯ ಹುಳು-ಹುಪ್ಪಟೆ, ಪ್ರಾಣಿ-ಪಕ್ಷಿ, ಗಿಡ-ಮರ, ಬೆಟ್ಟ-ಗಿಡ್ಡ ಇವುಗಳ ಬಗ್ಗೆ ತಿಳಿದವನಾಗಿದ್ದನು. ಆದ್ದರಿಂದ ಇಲ್ಲಿ ಮಂದಣ್ಣನನ್ನು ತೇಜಸ್ವಿ 'ಪ್ರಕೃತಿಯ ಶಿಶು'ವಾಗಿ ಚಿತ್ರಿಸಿರುವುದನ್ನು ಕಾಣಬಹುದು. ಅಲ್ಲಿ ಮಂದಣ್ಣ ಪ್ರಕೃತಿ ಜೊತೆ ಅವಿನಾಭಾವ ಸಂಬಂಧ ಹೊಂದಿರುತ್ತಾನೆ. ಕುವೆಂಪುರವರ 'ಮಲೆಗಳಲ್ಲಿ ಮದುಮಗಳು' ಕಾದಂಬರಿಯ 'ಗುತ್ತಿ' ಯ ಪಾತ್ರವನ್ನು ತೇಜಸ್ವಿ ಕರ್ವಾಲೊ ಕಾದಂಬರಿಯ 'ಮಂದಣ್ಣ'ನಲ್ಲಿ ನೆನಪಿಗೆ ತರುತ್ತಾರೆಂದು ಹೇಳಬಹುದು. ಕುವೆಂಪು ಕಾದಂಬರಿಯಲ್ಲಿ ಬರುವ 'ಹುಲಿಯ' ನಾಯಿಯ ಪಾತ್ರವನ್ನು ಕರ್ವಾಲೊ ಕಾದಂಬರಿ ಹಾಗೂ ಇತರ ಕತೆಗಳಲ್ಲಿ ಬರುವ 'ಕಿವಿ' ಎಂಬ ನಾಯಿ ಪಾತ್ರವು ಇಲ್ಲಿ ನೆನಪಿಗೆ ತರುವುದನ್ನು ಕಾಣಬಹುದು.

'ನಿಗೂಢ ಮನುಷ್ಯರು' ಕಿರುಕಾದಂಬರಿಯ ಜಗನ್ನಾಥನೇ ಸ್ವರೂಪ ಕಿರು ಕಾದಂಬರಿಯ ಶ್ರೀನಿವಾಸನ ಪಾತ್ರದಲ್ಲಿ ಮುಂದುವರಿಯುವುದನ್ನು ಕಾಣಬಹುದು. ನಿಗೂಢ ಮನುಷ್ಯರಲ್ಲಿ 'ರಹಸ್ಯ' ಸ್ಥಾಯಿಯಾದರೆ, ಸ್ವರೂಪದಲ್ಲಿ 'ಮೌನ' ಸ್ಥಾಯಿಯಾಗಿದೆ."[೧]

ಸ್ವರೂಪದಲ್ಲಿ ಶ್ರೀನಿವಾಸ ನಗರ ಜೀವನ ತೊರೆದು ಮಲೆನಾಡಿನ ಹಳ್ಳಿಯಲ್ಲಿ ವಾಸವಾಗಿದ್ದಾನೆ. ಇಲ್ಲಿ ಪ್ರಕೃತಿ ಮತ್ತು ಮಾನವನ ಸಂಬಂಧ ಮೂಡಿಬಂದಿದೆ. ನಿಗೂಢ ಮನುಷ್ಯರು ಕಾದಂಬರಿಯಲ್ಲಿ ಅನುಭವಕ್ಕಾಗಿ ಜಮೀನನ್ನು ಕೊಳ್ಳಲು ಜಗನ್ನಾಥ ಬಂದರೆ, ಸ್ವರೂಪದ ಶ್ರೀನಿವಾಸ ಇಲ್ಲಿ ವ್ಯವಸಾಯಗಾರನಾಗಿದ್ದಾನೆ. ಈ ಗವಿಗುಡ್ಡದಲ್ಲಿ ಅವನು ಹಲವಾರು ತೊಂದರೆಗಳನ್ನು ಅನುಭವಿಸಬೇಕಾಗುತ್ತದೆ. ಅದನ್ನು ಸ್ವಗತಲಹರಿಯಲ್ಲಿ ತನ್ನ ಗೆಳೆಯ ಹೇಮಂತನಿಗೆ ಒಂದೊಂದನ್ನೇ ಬಿಡಿಸುತ್ತಾ ಹೋಗುವುದನ್ನು ಕಾಣಬಹುದು.

ನಿಗೂಢ ಮನುಷ್ಯರಲ್ಲಿ ಜಗನ್ನಾಥ ಅಧ್ಯಾಪಕ ವೃತ್ತಿಯನ್ನು ಬಿಟ್ಟು ಸಾಹಿತ್ಯಾಸಕ್ತನಾಗಿದ್ದರೂ ಕೂಡ ಅದರ ಒಲವನ್ನು ತೊರೆದು ಮಲೆನಾಡಿನಲ್ಲಿ ಜಮೀನನ್ನು ಕೊಂಡು ಕೃಷಿ

ಚಟುವಟಿಕೆಯಲ್ಲಿ ಪಾಲ್ಗೊಳ್ಳಲು ಬಂದಿರುತ್ತಾನೆ. ಹೀಗೆ ಸ್ವರೂಪ ಮತ್ತು ನಿಗೂಢ ಮನುಷ್ಯರು ಕಿರುಕಾದಂಬರಿಗಳಲ್ಲಿನ ಪಾತ್ರಗಳು ಕೃಷಿಯಲ್ಲಿ ತೊಡಗಿಕೊಳ್ಳುವುದನ್ನು ಕಾಣಬಹುದಾಗಿದೆ. ಅದೇ ರೀತಿ ತೇಜಸ್ವಿಯವರು ಕೂಡ ಕೃಷಿಯಲ್ಲಿ ತಮ್ಮನ್ನು ತೊಡಗಿಸಿಕೊಂಡಿದ್ದಾರೆ.

ನಾಗರಿಕ ಬದುಕಿನಿಂದ ದೂರ ಸರಿದವರಂತೆ ಮಲೆನಾಡಿನ ಮೂಲೆಯೊಂದರಲ್ಲಿ ಕುಳಿತಿದ್ದರೂ, ತೇಜಸ್ವಿ ನಾಗರಿಕ ಜಗತ್ತಿನ ಎಲ್ಲ ವಿದ್ಯಮಾನಗಳನ್ನು ಸೂಕ್ಷ್ಮವಾಗಿ ಅವಲೋಕಿಸಿದರು; ಕ್ಷಣದಿಂದ ಕ್ಷಣಕ್ಕೆ ಬದಲಾಗುತ್ತಿರುವ ಜಾಗತಿಕ ವಿದ್ಯಮಾನಗಳಿಗೆ ತೀವ್ರವಾಗಿ, ಅರ್ಥಪೂರ್ಣವಾಗಿ ಪ್ರತಿಕ್ರಿಯಿಸಿದವರು. ಮನುಷ್ಯನನ್ನು ಪ್ರಕೃತಿಯ ಒಂದು ಭಾಗವಾಗಿಯೇ ಪರಿಗಣಿಸಿದ ತೇಜಸ್ವಿ ಅವರಿಗೆ ಪ್ರಕೃತಿಯ ನಾಶ ಮತ್ತು ಮನುಷ್ಯರ ನಾಶ ಬೇರೆ ಬೇರೆಯಾಗಿ ಕಾಣಲಿಲ್ಲ.

"ಲೋಹಿಯಾರ ತತ್ವಚಿಂತನೆಯಿಂದ ಪ್ರಭಾವಿತರಾದ ತೇಜಸ್ವಿ ಭಾರತೀಯ ಸಮಾಜವನ್ನು ಅದರ ಎಲ್ಲ ವಾಸ್ತವಗಳಿಂದ ಗ್ರಹಿಸಲು ಯತ್ನಿಸಿದರು. ಕ್ಷಣಕ್ಷಣಕ್ಕೆ ಬದಲಾಗುತ್ತಿರುವ ವಿಜ್ಞಾನ ಮತ್ತು ಇತರೆ ಜ್ಞಾನಗಳನ್ನು ಸದಾ ಎಚ್ಚರದಿಂದ ನೋಡುತ್ತಿದ್ದ ತೇಜಸ್ವಿ ಅವರಿಗೆ ತಮ್ಮ ಸುತ್ತಲಿನ ಪರಿಸರದ ಬಗ್ಗೆ ಅಪಾರ ಕುತೂಹಲ ಇತ್ತು. ಈ ಕುತೂಹಲ, ಬೆರಗು, ಮುಗ್ಧತೆಗಳನ್ನು ಕೊನೆಯವರೆಗೂ ಉಳಿಸಿಕೊಂಡಿದ್ದ ಅವರು ಜಗತ್ತನ್ನು, ಪರಿಸರವನ್ನು ಮತ್ತು ಮನುಷ್ಯನನ್ನು ಸೂಕ್ಷ್ಮವಾಗಿ ಗಮನಿಸುತ್ತಲೇ ಇದ್ದರು. ಓದಿನ ಮೂಲಕ ಮನುಷ್ಯ ಪಡೆದುಕೊಂಡ ಜ್ಞಾನದಷ್ಟೇ ಅನುಭವದ ಮೂಲಕ ಪಡೆದುಕೊಂಡ ಅರಿವೂ ಮುಖ್ಯವಾದದ್ದು ಎಂಬ ಎಚ್ಚರ ತೇಜಸ್ವಿಯವರಿಗೆ ಇದ್ದುದರಿಂದಲೇ ಅವರಿಗೆ ಕರ್ವಾಲೊ ಮತ್ತು ಮಂದಣ್ಣ ಮುಖ್ಯರಾದರು".[೨] ಆಗಾಗಿ ಕಾದಂಬರಿಯ ಎಲ್ಲಾ ಪಾತ್ರಗಳು ಪ್ರಾಮುಖ್ಯತೆಯನ್ನು ಪಡೆದಿದ್ದವು.

ಮನುಷ್ಯರ ಪಾಡನ್ನು ಅವರು ನಿಸರ್ಗದ ಅನುಭಾವದಿಂದ ಪರಿಶೀಲಿಸಿದರು, ತೇಜಸ್ವಿ ಅವರು ಎಂದೂ ಪರಿಸರದ ಹೊರ ಮೈಯನ್ನು ನೋಡದೆ ಅದರ ಅಂತರಾಳದ ಮೂಲಕ ಮನುಷ್ಯ ಪರಿಸರದ ದ್ವಂದ್ವವನ್ನು ವಿಕಾಸದ ವ್ಯಕ್ತಿವಿಶಿಷ್ಟತೆಯಲ್ಲಿ ನೋಡಲು ಪ್ರಯತ್ನಿಸಿದರು. ಸಮಸ್ತ ಜೀವರಾಶಿಯನ್ನು ಇಡಿಯಾಗಿ ಪರಿಶೀಲಿಸುತ್ತಾ ಅದರ ಕೇಂದ್ರದಲ್ಲಿ ಮನುಷ್ಯನನ್ನು ಇಟ್ಟು ನೋಡಿದರು.

ಮಲೆನಾಡಿನ ಮುಗ್ಧ ಸಾಮಾನ್ಯರ ಒಳಗಿನ ಅಸಾಮಾನ್ಯ ನಿಸರ್ಗ ಕಲ್ಪನೆಗಳನ್ನು ಅವರ ಸಂಬಂಧಗಳನ್ನು ಅಲ್ಲಿನ ಪರಿಸರದ ಜೀವವೈವಿಧ್ಯದ ಅನಂತ ಕೊಂಡಿಗಳನ್ನು ದಾರ್ಶನಿಕ ಮನಸ್ಥಿತಿಯಲ್ಲಿ ವಿವರಿಸಿದ್ದಾರೆ.

ತೇಜಸ್ವಿ ಸೃಜನಶೀಲತೆಯ ತಳದಲ್ಲಿದ್ದುದು ನಿಗೂಢ ಮನುಷ್ಯರು ಮತ್ತು ಅಸ್ತಿತ್ವಕ್ಕೆ ನೆಲೆಯಾಗಿದ್ದ ನಿಸರ್ಗ. ನಿಸರ್ಗವನ್ನು ತೇಜಸ್ವಿ ಕೇವಲ ಪರಿಸರವಾದಿಯ ಕಾಳಜಿಯಿಂದ ಕಂಡವರಲ್ಲ. ನಿಸರ್ಗವು ತೇಜಸ್ವಿಗೆ ವಿಸ್ಮಯ ನಿಗೂಢವಾಗಿ ಕಂಡಿತ್ತಾದರೂ ಇಡಿಯಾಗಿ ಅವರು ನಿಸರ್ಗವನ್ನು ಅವರು ಕೇವಲ ಅಮೂರ್ತವಾದ ದಿವ್ಯತೆಯಲ್ಲಿ ಹುಡುಕುತ್ತಿರಲಿಲ್ಲ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಅಂಗಾಡಿ ಏಲಕ್ಕಿ ಬೆಳೆ ಕುಸಿಯುತ್ತಿರುವುದರ ಬಗ್ಗೆ ತನಿಖೆ ಮಾಡಿ ಕೇಂದ್ರಸರ್ಕಾರಕ್ಕೆ ವರದಿ ಕಳುಹಿಸಲೆಂದು ಆತ ಕೆಸರೂರಿಗೆ ಬರುತ್ತಾನೆ. ಬಂದ ಮೇಲೆ ಅವನಿಗೆ ಕೆಸರೂರಿನ ಹಲವಾರು ಸಮಸ್ಯೆಗಳ ಬಗ್ಗೆ ತಿಳಿಯುತ್ತದೆ. ಅಲ್ಲಿನ ಹಲವಾರು ಸಮಸ್ಯೆಗಳೊಂದಿಗೆ ನೇಗಿಹಾಳರ ಕೊಲೆಯೂ ಸೇರಿಕೊಂಡಿದೆ ಎಂಬುದನ್ನು ತಿಳಿದು ಪ್ರಕೃತಿಯು ಹೇಗೆ ಮಾನವನಿಗೆ ಜೀವನ ನಡೆಸಲು ಪೂರಕವಾಗಿರುತ್ತದೆಯೋ ಹಾಗೆಯೇ ಅದು ಅವನಿಗೆ ಸಮಸ್ಯಾತ್ಮಕವೂ ಆಗಿ ಬಿಡುವುದನ್ನು ಇಲ್ಲಿ ಕಾಣಬಹುದು. ಮನುಷ್ಯನ ಜೀವಸೃಷ್ಟಿ ಪ್ರಕೃತಿಯಿಂದಲೇ ಅಂತ್ಯವೂ ಪ್ರಕೃತಿಯಿಂದಲೇ ಇಂದು ಹೇಳಬಹುದು.

ತೇಜಸ್ವಿ ನಾವೆಲ್ಲಾ ನೋಡಿದರೂ ಕಾಣದ ನಮ್ಮ ಸುತ್ತಲಿನ ಬದುಕು, ಪರಿಸರದಲ್ಲೇ ಸೂಕ್ಷ್ಮ ವಿವರಗಳನ್ನು ಕಾಣುವ, ಅದರ ಮೂಲಕ ಮಿಂಚನ್ನು ತೋರಿಸುವ ಕತೆಗಳನ್ನು ನೀಡಿದ್ದಾರೆ. ಕಾಡಿನ ನಿಗೂಢ ಜಾಡುಗಳ ಹಾದಿಯಲ್ಲಿ ನಡೆದು ಮನುಷ್ಯ ಸಮಾಜದ ವ್ಯರ್ಥ ಜೀವನ ವಿಧಾನವನ್ನು ನಿಸರ್ಗದ ಅನುಭಾವದಿಂದ ಬಿಡಿಸಲು ತೊಡಗಿದರು. ಸಾಮಾಜಿಕ ನಿರೂಪಣೆಗಳ ಗದ್ದಲದಲ್ಲಿ ಮರೆಗೆ ಸರಿದ ತೇಜಸ್ವಿ ನಿಗೂಢ ಮೌನದಲ್ಲಿ ಮನುಷ್ಯನ ಸಾಧ್ಯತೆಯನ್ನು ಕಂಡುಕೊಂಡವರು. ಕಾಡಿನ ನಿಗೂಢದ ಮರೆಯಲ್ಲಿ ಬದುಕುವ ಕುಟುಂಬಗಳೆಲ್ಲವೂ ಇರುವ ಲೋಕದ ಹಂಗು ಕಳೆದುಕೊಂಡು ವಿಹರಿಸುವ ಜೀವವಿಧಾನವಾಗಿ ಕಾಣುತ್ತವೆ. ಮಾಯಾಲೋಕದಲ್ಲಿ ಸಮಗ್ರತೆ ಕ್ರಮವನ್ನು ಮೀರಿ ಅರಿವೆಗೆ ಬಾರದೆ ಪ್ರತ್ಯೇಕವಾಗಿರುವಂತೆ ವಿವರಣೆಗೆ ಸಾಧ್ಯವಾಗದ ಪ್ರತಿಲೋಕವನ್ನು ವಿವರಿಸುವುದರಲ್ಲಿ ತೇಜಸ್ವಿ ಪ್ರಸಿದ್ಧರಾಗಿದ್ದಾರೆ.

ಪ್ರಕೃತಿ ಮತ್ತು ಮಾನವ ಸಂಬಂಧ ಚಿತ್ರಣವನ್ನು ನೀಡುವಲ್ಲಿ 'ಕರ್ವಾಲೊ' ಪ್ರಮುಖ ಕೃತಿ. ಇಲ್ಲಿ ಜನಪದ ವಿಜ್ಞಾನಿಗಳಾಗಿ ಮಂದಣ್ಣ, ಎಂಕ್ಟ, ಕರಿಯಪ್ಪ ಇವರೆಲ್ಲಾ ಪ್ರಕೃತಿಯ ನಡುವೆ ಬಾಳಿ ಬದುಕುತ್ತಿರುವವರು, ಹಾಗಾಗಿ ಅವರಿಗೆ ಪ್ರಕೃತಿ ರಹಸ್ಯಮಯ ಸಂಗತಿಯಾಗಿ ಕಾಣುವುದೇ ಇಲ್ಲ. ಆದರೆ ಅನ್ವೇಷಕ, ವಿಜ್ಞಾನಿಯಾದ ಕರ್ವಾಲೊಗೆ ಪ್ರಕೃತಿ ವಿವರಗಳು

ಸರಳ ಸುಲಭವಲ್ಲ. ಹಾಗಾಗಿ ಪ್ರಕೃತಿಯ ಬಗ್ಗೆ ಬಲ್ಲ ಅವರನ್ನು ಪ್ರಕೃತಿಯಲ್ಲಿ ಒಂದು ಪಾತ್ರವನ್ನಾಗಿ, ಪ್ರಕೃತಿಯ ಮಕ್ಕಳನ್ನಾಗಿ ಪ್ರಕೃತಿಯ ಅಧ್ಯಯನದ ಎಂದು ತಿಳಿಸಿದ್ದಾರೆ.

ಪ್ರಕೃತಿಯ ಗುಣ ಸಹಜವಾದುದು. ಅದು ಸ್ವಾನುಭವ ಮತ್ತು ಸತ್ಯ. ಪ್ರಕೃತಿಗೆ ತನ್ನದೇ ಆದ ವಿಕಾಸಕ್ರವಿರುತ್ತದೆ. ಮನುಷ್ಯ ಇದಕ್ಕೆಲ್ಲ ತಡೆ ಒಡ್ಡಿದಂತೆಲ್ಲಾ ಅದರ ದಿಕ್ಕು ಬದಲಾಗುತ್ತದೆ. ಇನ್ನೊಂದು ಕಡೆ ತೇಜಸ್ವಿ ಹೇಳುವಂತೆ ಪ್ರಕೃತಿಯೊಡನೆ ಮನುಷ್ಯನ ನಾಶ ಹೇಗಾಗುತ್ತದೆ ಎಂಬುದಕ್ಕೆ ಅವರ ತೋಟದ ಧೂಪದ ಮರಗಳನ್ನು ಯಾರ್‍ಯಾರೋ ಕಡಿದು ಹಾಕಿದ್ದಕ್ಕೆ ಅಲ್ಲಿಯೇ ವಸತಿ ಹೂಡಬೇಕಾದ ಒಂದು ಜಾತಿಯ ಪಕ್ಷಿ ಸಂತತಿ ಪತ್ತೇ ಇಲ್ಲದಂತಾಯಿತು. ಅಂದರೆ ಪ್ರಕೃತಿಯನ್ನು ಇಲ್ಲಿ ಮನುಷ್ಯ ತನ್ನ ಸ್ವಾರ್ಥಕ್ಕಾಗಿ ಬಳಸಿಕೊಂಡು ಪ್ರಕೃತಿ ನಾಶದ ಜೊತೆಗೆ ತನ್ನ ನಾಶವನ್ನು ಕಂಡುಕೊಳ್ಳುತ್ತಾನೆ.

ತೇಜಸ್ವಿ ಸಾಹಿತ್ಯದಲ್ಲಿನ ಹುಡುಕಾಟದಲ್ಲಿ ಎರಡು ಬಗೆಗಳಿವೆ. ಪರಿಸರ ಒಂದಾದರೆ, ಮನುಷ್ಯನ ಹುಡುಕಾಟ ಎರಡನೆಯದು. ಇವುಗಳ ನಡುವಿನ ಅವಲಂಬನೆಯ ಪ್ರಶ್ನೆಯ ಒಳಗೆ ವೈರುಧ್ಯಗಳ ಹುಡುಕಾಟ, ತನ್ನಷ್ಟಕ್ಕಿರುವ ನಿಸರ್ಗ ಮತ್ತು ಸುಮ್ಮನಿರಲಾಗದ ಮನುಷ್ಯನನ್ನು ಇವೆಲ್ಲದರ ನಡುವೆ ಪ್ರಕೃತಿಯ ಭಾಗವಾಗಿ ವಿಸ್ತಾರಗೊಂಡಿರುವ ಮನುಷ್ಯನ ಬದುಕನ್ನು ಕಾಣಬಹುದು.

**ಆ) ಪ್ರಕೃತಿ ಮತ್ತು ಸಮಾಜ:**

ತೇಜಸ್ವಿಯವರ ಬರಹ ತೆರೆದಿಡುವ ಸಮಾಜವು ಸ್ವಾತಂತ್ರ್ಯ ನಂತರದ ಭಾರತೀಯ ಸಮಾಜದ ಜೀವಂತ ಚಿತ್ರಣ. ಮಾನವ ತಾನು ಬದುಕುತ್ತಿರುವ ಸಾಮಾಜಿಕ ಪರಿಸರದಲ್ಲಿ ನಡೆದುಕೊಳ್ಳುವ ರೀತಿ, ನೀತಿಗಳೆಲ್ಲ ಸಾಮಾಜಿಕ ಚೌಕಟ್ಟಿನಲ್ಲಿ ಕಂಡು ಬರುತ್ತವೆ.

'ಅವನತಿ' ಕಥೆಯಲ್ಲಿ ನಾವು ಸಮಾಜದ ಹಲವು ಮಗ್ಗಲುಗಳ ಬಗ್ಗೆ ತಿಳಿಯುತ್ತೇವೆ. ಕುರುಡು ನಂಬಿಕೆಗಳ ಆಗರವಾಗಿರುವ ಗ್ರಾಮೀಣ ಜನಗಳ ಜೀವನ ಮತ್ತು ಅವರ ಸೀಮಿತ ಆಸೆ–ಆಕಾಂಕ್ಷೆಗಳನ್ನು ಬಿಂಬಿಸುತ್ತದೆ. ಉತ್ತಮ ಶಿಲ್ಪಿಯಾಗಬೇಕಿದ್ದ ಸೂರಾಚಾರಿ ಅಲ್ಲಿಯ ಪರಿಸರದಲ್ಲಿ ಅವನತಿ ಹೊಂದುವುದು ಒಂದು ಮುಖವಾದರೆ, ಮಕ್ಕಳ ಯೋಗ ಇಲ್ಲದ ಸುಬ್ಬಯ್ಯನದು ಇನ್ನೊಂದು ಮುಖ. ಸುಬ್ಬಯ್ಯನ ಹೆಂಡತಿ ಗೌರಿಗೆ ಮಕ್ಕಳು ಆಗಿ ಉಳಿಯದಿದ್ದಕ್ಕೆ ಕಾರಣ ಅವಳ 'ಎದೆ'ಯಲ್ಲಿನ ದೋಷ ಎಂದು ಹೇಳುವ ಸೂರಾಚಾರಿಯ ಮಾತು ವಿಕೃತಗೊಂಡ ಸಾಮಾಜಿಕ ಮೌಲ್ಯಗಳನ್ನು ಎತ್ತಿ ತೋರಿಸುತ್ತದೆ.

'ಕುಬಿ ಮತ್ತು ಇಯಾಲ' ಒಂದು ರೋಗಗ್ರಸ್ತ ಸಮಾಜದ ವಿಕೃತ ಸೃಷ್ಟಿಯಾಗಿ ಅಲ್ಲಿನ ಪೊಲೀಸ್, ಡೈರಕ್ಟರ್, ಇಯಾಲಳ ತಂದೆ, ಕಾಂಪೌಂಡರ್ ಇವರೆಲ್ಲರೂ ಜೀವನದ ಅರ್ಥವಂತಿಕೆಯನ್ನು ತಿಳಿಯದೇ ಬಳಲುತ್ತಾರೆ. ಇವುಗಳೆಲ್ಲರ ಮಧ್ಯೆ ಮೃದು ಮನಸ್ಸಿನ ಇಯಾಲ ಕೊಲೆಯಾಗುವುದನ್ನು ಕಾಣಬಹುದು. ಅದು ಇಡೀ ಸಮಾಜದ ಅನೈತಿಕತೆ, ಅನಾಚಾರಕ್ಕೆ ಪ್ರತೀಕವಾಗುತ್ತದೆ. ಇಂತಹ ದುರಂತದ ಮಧ್ಯೆ ಜೀವನಕ್ಕೆ ಒಂದು ಅರ್ಥವಂತಿಕೆಯನ್ನು ತಂದು ಕೊಡಲು ಪ್ರಯತ್ನಿಸುವ ಡಾಕ್ಟರ್‌ನ ಒಳನೋವು ಅರ್ಥ ಪೂರ್ಣವಾಗುತ್ತದೆ. ಸದಾ ಆದರ್ಶ ಸಮಾಜದ ಕನಸು ಕಾಣುವ, ತನ್ನ ಸುತ್ತಲಿನ ಅಮಾಯಕ ಜನಗಳ ನೋವಿನಲ್ಲಿ ಪಾಲ್ಗೊಳ್ಳಲು ಈತನ ಪಾತ್ರ ಹೃದಯಸ್ಪರ್ಶಿಯಾಗಿದೆ. ಇಲ್ಲಿನ ಸಮಾಜದಲ್ಲಿ ವೈಜ್ಞಾನಿಕ ರೀತಿಯಲ್ಲಿ ಬದಲಾವಣೆ ತರಲು ಕುಬಿ ಹೋರಾಟ ನಡೆಸಿದರೆ, ಕುರುಡ ನಂಬಿಕೆಯನ್ನೇ ಆಶ್ರಯಿಸಿ ಅದರಿಂದ ಬದಲಾವಣೆ ಬೇಡ ಎನ್ನುವ ಕಾಂಪೌಂಡರ್ ಇಬ್ಬರೂ ಒಂದೇ ಸೂರಿನ ಕೆಳಗಡೆ ಇರುವುದನ್ನು ಕಾಣಬಹುದು.

ಅಬಚೂರಿನ ಪೋಸ್ಟಾಫಿಸು ಕಥೆಯಲ್ಲಿ ಸಾಮಾಜಿಕ ಪ್ರಜ್ಞೆ ಬಹಳ ಮಟ್ಟಿಗೆ ಮೇಲ್ಪದರದಲ್ಲಿ ಕಂಡು ಬರುವಂತದ್ದು. ಆದರೆ ಪೋಸ್ಟಾಫೀಸು ಬೋಬಣ್ಣನ ವೈಯಕ್ತಿಕ ಜೀವನದ ಸಾಮಾಜಿಕ ಜೀವನದಲ್ಲಿ ಹೆಚ್ಚಿನ ತೊಳಲುವಿಕೆಯನ್ನು ತಂದು ಹಾಕುತ್ತದೆ. ಪೋಸ್ಟಾಫೀಸಿನ ಆಗಮನದಿಂದ ಇಡೀ ಪರಿಸರದಲ್ಲಿ ಸೃಷ್ಟಿಯಾಗುವ ಸಮಸ್ಯೆಗಳು ಗಮನಾರ್ಹ. ಕುತೂಹಲವನ್ನಷ್ಟೇ ಅಲ್ಲದೆ ಜನಗಳಲ್ಲಿ ಸಂಶಯವನ್ನು ಬಿತ್ತುವುದರಿಂದ ಬೋಬಣ್ಣನ ವೈಯಕ್ತಿಕ ದುರಂತವೇ ಮುಖ್ಯವಾಗಿ ಕಥೆಯ ಸಾಮಾಜಿಕ ಆಯಾಮ ಸ್ವಲ್ಪ ಮಟ್ಟಿಗೆ ಪ್ರಾಧಾನ್ಯ ಕಳೆದುಕೊಳ್ಳುತ್ತದೆ. ಕೊನೆಗೆ ಬೋಬಣ್ಣ ಅಬಚೂರಿನ ಸಾಮಾಜಿಕ ಜೀವನವನ್ನು ತೊರೆದು ಹೋಗುತ್ತಾನೆ. ನಂತರ ಬೋಬಣ್ಣನ ಹೆಂಡತಿ ಮತ್ತು ಅವನ ಅತ್ತೆ ಅಲ್ಲಿ ಇದ್ದ ಸಾಮಾಜಿಕ ಜೀವನದಲ್ಲೇ ತಮ್ಮ ಜೀವನ ರೂಪಿಸಿ ಕೊಳ್ಳುವುದನ್ನು ಕಾಣುತ್ತೇವೆ.

'ತಬರನ ಕತೆ'ಯಲ್ಲಿ ವ್ಯಕ್ತಿಯೊಬ್ಬ ತುಕ್ಕು ಹಿಡಿದ ಸಮಾಜದಲ್ಲಿ ಅನುಭವಿಸುವಂತಹ ನೋವು-ಹತಾಶೆ, ನರಕವನ್ನು ಚಿತ್ರಿಸುತ್ತದೆ. ಜೊತೆಗೆ ಒಂದು ಕ್ರೂರ ವ್ಯವಸ್ಥೆ ವ್ಯಕ್ತಿಯೊಬ್ಬನ ಹಿತವನ್ನು ಬಲಿತೆಗೆದುಕೊಳ್ಳುವುದನ್ನು ಈ ಕಥೆಯಲ್ಲಿ ಕಾಣಬಹುದು. ತಬರನ ಕಥೆಯು ವ್ಯಕ್ತಿಯು ದುರಂತದ ಸಂದರ್ಭದಲ್ಲಿ ಸಾಮಾಜಿಕ ಸಂದರ್ಭವೊಂದು ಅಮಾನವೀಯವಾಗುತ್ತಿರುವ ದುರಂತದ ಬಗ್ಗೆ ಹೇಳುತ್ತದೆ. ಸ್ವತಂತ್ರ ಭಾರತದ ಸಾಮಾಜಿಕ ವ್ಯವಸ್ಥೆಯ ವಿಷಮತೆಯನ್ನು, ಅಸಹಾಯಕ ವ್ಯಕ್ತಿಯೊಬ್ಬನನ್ನು ಒಂದು ಆಧುನಿಕ ವ್ಯವಸ್ಥೆ

ಹೇಗೆ ಹುಚ್ಚನನ್ನಾಗಿಸ ಬಲ್ಲದೆಂಬುದರ ಕರಾಳ ಅನುಭವವೇ 'ತಬರನಕಥೆ'. ಇಲ್ಲಿ ತಬರ ಮತ್ತು ಅವನ ಹೆಂಡತಿ ಪಪ್ಪಿಯ ಸಾಮಾಜಿಕ ಜೀವನ ಹೇಗೆ ಹದಗಡೆತ್ತದೆ ಹಾಗೂ ಸ್ವತಂತ್ರ ಭಾರತದ ಸಾಮಾಜಿಕ ಜೀವನದ ವಿಕೃತಿಯನ್ನು ವರ್ಣಿಸುತ್ತದೆ.

ನಿಗೂಢ ಮನುಷ್ಯರು ಕಿರು ಕಾದಂಬರಿಯ ಮುಖ್ಯಪಾತ್ರವಾದ ಗೋಪಾಲಯ್ಯನ ಪಾತ್ರದಲ್ಲಂತೂ ಸಾಮಾಜಿಕತೆ ಎಂಬುದು ಪತ್ತೇದಾರಿಕೆ ಆಗುತ್ತದೆ. ಈ ನಿಟ್ಟಿನಲ್ಲಿ ನೋಡಿದಾಗ, ಎಲ್ಲ ಸಾಮಾಜಿಕ ಸ್ಥಿತ್ಯಂತರಗಳ ಹಿಂದೆ ಅಡಗಿರುವ ಸತ್ಯಾಸತ್ಯತೆಯನ್ನು ಪತ್ತೆಹಚ್ಚಲು ಒಬ್ಬ ಸಾಮಾಜಿಕ ವ್ಯಕ್ತಿ ನಡೆಸುವ ಹೋರಾಟವೇ ತೇಜಸ್ವಿಯವರ ಮೂರು ಮುಖ್ಯ ಕೃತಿಗಳಾದ 'ನಿಗೂಢ ಮನುಷ್ಯರು', 'ಕರ್ವಾಲೊ', ಮತ್ತು 'ಚಿದಂಬರ ರಹಸ್ಯ'ಗಳ ಹಿಂದಿನ ಮೂಲ ಮಾದರಿ ಎಂದು ಹೇಳಬಹುದು.

ನಿಗೂಢ ಮನುಷ್ಯರಲ್ಲಿ ಮರಸರ, ಲೋರಿ, ಕರಿಯ ಕಾಂಪು ಇವರುಗಳ ಪ್ರಪಂಚವೊಂದೇ ಅದು ಕಿರಾತ ಪ್ರಪಂಚವಲ್ಲ, ಇಲ್ಲಿ ಗೋಪಾಲಯ್ಯ, ರಂಗಪ್ಪ ಮತ್ತು ಜಗನ್ನಾಥ ಇವರು ನಾಗರೀಕ ವೇಷತೊಟ್ಟಿರುವ ಪಿತೂರಿಕೋರರ, ಸಂಚುಕೋರರ, ಪರಸ್ಪರ ಅಪನಂಬಿಕೆ ಪಡುವ ನಿಗೂಢ ಪ್ರಪಂಚವಾಗಿ ಕಂಡು ಬರುತ್ತಾರೆ. ಗೋಪಾಲಯ್ಯ ಆಶ್ರಯ ನೀಡಿರುವ ನಾಲಿಗೆ ಕಳೆದುಕೊಂಡಿರುವ ಶಾರಿ. ಈ ಇಡೀ ಸಮಾಜ ಯಾವ ಯಾವ ಮಟ್ಟಕ್ಕೆ ತನ್ನ ಕ್ರೌರ್ಯವನ್ನು ಕೊಂಡೊಯ್ಯಬಲ್ಲದು ಎನ್ನುವುದಕ್ಕೆ ಸಾಕ್ಷಿಯಾಗುತ್ತಾಳೆ. ಒದಗಿಸುತ್ತಾಳೆ. ಶಾರಿ ಒಂದಾನೊಂದು ಕಾಲದಲ್ಲಿ ಗಂಧ ಸಾಗಣೆ ಗುಂಪಿನಲ್ಲಿದ್ದವಳು, ಆಗ ಅವಳು ಕಾಡಿನಲ್ಲೆಲ್ಲಾ ಅಲೆದಾಡಿ ಅಲ್ಲಿನ ಎಲ್ಲಾ ದಾರಿಗಳನ್ನು ಬಲ್ಲವಳಾಗಿದ್ದಳು. ಹಾಗಾಗಿ ಅಲ್ಲಿನ ಸಾಮಾಜಿಕ ಪರಿಸರ ತುಂಬಾ ಪರಿಚಿತವಾಗಿತ್ತು. ಜೊತೆಗೆ ಅವಳು ತನ್ನ ಸಮಾಜದಿಂದಲೇ ತನ್ನ ನಾಲಿಗೆ ಕಳೆದುಕೊಂಡು ಮೂಗಿಯಾಗಿದ್ದಳು. ಅಂದರೆ ಒಂದು ಸಮಾಜ ತಾನು ಬದುಕಲು ಯಾರನ್ನು ಬೇಕಾದರೂ ಬಲಿ ತೆಗೆದುಕೊಳ್ಳುತ್ತದೆ, ಏನನ್ನಾದರೂ ಮಾಡಲು ತಯಾರಿರುತ್ತದೆ ಎಂಬುದಕ್ಕೆ ಶಾರಿಯೇ ಉದಾಹರಣೆ. ಇಲ್ಲಿ ಮೇಲು ನೋಟಕ್ಕೆ ನಾಗರೀಕರಂತೆ ಕಾಣುವ ವ್ಯಕ್ತಿಗಳ ಶೋಷಣಾ ಪ್ರಧಾನವಾದ ಇನ್ನೊಂದು ಪ್ರಪಂಚ, ಒಬ್ಬರ ಮೇಲೆ ಒಬ್ಬರು ಸದಾ ಪತ್ತೇದಾರಿಕೆ ಮಾಡುತ್ತಿರುವ, ಹೊಂಚು ಹಾಕುತ್ತಿರುವ ಈ ನಾಗರಿಕ ಸಮಾಜದ ಮೇಲೆ ಉಂಟಾಗುವ ಪ್ರಕೃತಿಯ ವಿಕೋಪ ಇನ್ನೊಂದು ಸ್ತರಕ್ಕೆ ಸೇರಿದ್ದು. ಇಲ್ಲಿ ಇಡೀ ಒಂದು ಜನ ವಸತಿಯೇ ನಾಶವಾಗುವ ಹಾಗೆ, ಉಗ್ರಗಿರಿ ಕುಸಿಯುವುದು, ಪ್ರಕೃತಿಯ ಎದುರು ಮನುಷ್ಯನ ಎಲ್ಲಾ ಲೆಕ್ಕಾಚಾರವೂ ನಿರರ್ಥಕ ಎನ್ನುವುದನ್ನು ತೋರಿಸುತ್ತದೆ. ಭೂಕಂಪ, ಬಿರುಗಾಳಿ–ಇವುಗಳ ಮೂಲಕ

ಅದು ಬಿತ್ತುವ ಭೀತಿ, ಸಂಶಯ, ಸಂಚಿನ ಮನೋಭಾವ–ಇವು ಪ್ರಕೃತಿಯ ವ್ಯಾಪಾರವನ್ನು ಮನುಷ್ಯ ತನ್ನ ಗ್ರಹಿಕೆಯ ಮೂಲಕ ಅರ್ಥೈಸುವ ಮಿತಿಗಳಿಗೆ ನಿದರ್ಶನವಾಗುತ್ತದೆ.

ಚಿದಂಬರ ರಹಸ್ಯದಲ್ಲಿ ಕೆಸರೂರಿಗೆ ಏಲಕ್ಕಿ ಬೋರ್ಡಿನ ಇಂಟೆಲಿಜೆನ್ಸ್ ಆಫೀಸರ್ ಆಗಿ ಬಂದ ಅಂಗಾಡಿ, ಏಲಕ್ಕಿ ಬೆಳೆ ಕುಸಿಯುತ್ತಿರುವ ಬಗ್ಗೆ ತನಿಖೆ ಮಾಡಿ ಸರ್ಕಾರಕ್ಕೆ ವರದಿ ಕಳಿಸಲೆಂದು ಬಂದಿದ್ದಾನೆ. ತನಿಖೆ ಆರಂಭಿಸುತ್ತಾನೆ. ಆಗ ಆತನಿಗೆ ಈ ಸಮಸ್ಯೆ ಕೆಸರೂರಿನ ಸಾಮಾಜಿಕ ವ್ಯವಸ್ಥೆಯೊಂದಿಗೆ ತಳಕು ಹಾಕಿಕೊಂಡಿದೆ ಎಂದು ಅನಿಸುತ್ತದೆ. ಕೃಷ್ಣೇಗೌಡ, ಸೀತಮ್ಮ, ಜಯಂತಿ, ರಫಿ, ಆಚಾರಿ, ಗೋಸಾಯಿಗಳು ಇವರೆಲ್ಲಾ ಸಾಮಾಜಿಕ ಜೀವನದಲ್ಲಿ ನೋವನ್ನು ಅನುಭವಿಸುತ್ತಿದ್ದಾರೆ. ಇಲ್ಲಿ ಆಧುನಿಕ ವ್ಯವಸ್ಥೆಯ ಪರಿಸ್ಥಿತಿಗೆ ಸಿಲುಕಿ ಅವರು ಹೇಗೆ ತಮ್ಮ ಸಾಮಾಜಿಕ ಅಸ್ತಿತ್ವವನ್ನು ಕಳೆದುಕೊಳ್ಳುತ್ತಾರೆ, ತಾವು ಕಟ್ಟಿಕೊಂಡ ಸಮಾಜದಿಂದ ಹೊರಬರಲು ಎಷ್ಟೇ ಪ್ರಯತ್ನಿಸಿದರೂ ಅದು ಸಾಮಾಜಿಕ ಅವನತಿಯಲ್ಲೇ ಅಂತ್ಯ ಕಾಣುವುದು ನಿಜವಾಗುತ್ತದೆ.

'ಕರ್ವಾಲೊ' ಕಾದಂಬರಿಯಲ್ಲಿ ನಿರೂಪಕರು ಪ್ರಕೃತಿಯ ಶಿಶುವಾದ ಮಂದಣ್ಣನನ್ನು ನಾನು ನಿಮ್ಮ ಊರಿನ ಕಡೆಗೆ ಬರುತ್ತೇನೆ ಎಂದಾಗ ಅಲ್ಲೇನಿದೆ ಸಾರ್, ಬರೀ ಕಾಡು, ಮಳೆ, ನೆತ್ತರು ಹೀರೋ ಜಿಗಣೆ, ಭತ್ತ, ಲೂಟಿ ಮಾಡೋ ಹಂದಿಗಳು ಎಂದು ನಿರುತ್ಸಾಹದಿಂದ ಮಾತಾನಾಡುತ್ತಾನೆ. ಆ ಪರ್ವತ ಶ್ರೇಣಿಗಳು ಅವುಗಳನ್ನು ಮುಸುಕಿರುವ ಮೋಡಗಳು ಇವುಗಳಿಂದ ಅಗೋಚರ ವಿಶ್ವ ಒಂದರ ತುಣುಕಿನಂತೆ ಕಂಡ ನಾರ್ವೆ ಬಗ್ಗೆ ಮಂದಣ್ಣ ಏಕೋ ತೀರಾ ನಿರ್ಲಕ್ಷ್ಯ ತೋರಿದ. ಅಂದರೆ ಅಲ್ಲಿ ಸಾಮಾನ್ಯನಿಗೆ ಮತ್ತು ಲೇಖಕರಿಗೆ ಸಾಮಾಜಿಕವಾಗಿ ಪ್ರಕೃತಿ ಹೇಗೆ ಭಿನ್ನವಾಗಿ ಕಾಣಿಸಿತು ಎಂಬುದರ ಚಿತ್ರಣವಿದೆ.

'ಜುಗಾರಿಕ್ರಾಸ್' ಎಂಬುದು ನಾಲ್ಕಾರು ದಾರಿಗಳು ಸೇರುವ ಒಂದು ಸ್ಥಳವಾಗಿದೆ. ಆ ಊರಿನ ಸಾಮಾಜಿಕ ವಿನಾಶವನ್ನು ಸೂಚಿಸಲು ಪ್ರಕೃತಿಯಲ್ಲಿನ ಬಿದಿರು ತೆನೆಯೊಡೆಯುತ್ತದೆ. ಅದು ಆ ಊರಿನ ಅವಸಾನವನ್ನು ಸೂಚಿಸುತ್ತದೆ ಎಂದು ಹೇಳಬಹುದು. ಅಲ್ಲಿ ಬಿದಿರು ತೆನೆ ಒಡೆದು ಹೂ ಬಿಡುವುದು ಅಪರೂಪ ಹಾಗೇನಾದರೂ ಅದು ಹೂ ಬಿಟ್ಟಿತೆಂದರೆ ಆ ಊರು ನಾಶ ಹೊಂದುತ್ತದೆ ಎಂಬ ನಂಬಿಕೆ, ಸಮಾಜಕ್ಕೆ ಏನೋ ಕೆಡಕು ಸಂಭವಿಸುತ್ತದೆ ಎಂಬ ಮೌಢ್ಯ ದಟ್ಟವಾಗಿದೆ. ಸದ್ಯದ ಆರ್ಥಿಕ, ಸಾಮಾಜಿಕ, ರಾಜಕೀಯ ವಿದ್ಯಮಾನಗಳ ಕೊಳಕನ್ನು ಬಲ್ಲವರಾಗಿದ್ದ ತೇಜಸ್ವಿ ಅವರು ಅಂತಹ ಅನುಭವಗಳನ್ನೆಲ್ಲಾ ಜುಗಾರಿಕ್ರಾಸ್‌ನ ಮೂಲಕ ಅದ್ಭುತವಾಗಿ ದಾಖಲಿಸಿದ್ದಾರೆ.

ಮಾಯಾಲೋಕ–೧ ಕಾದಂಬರಿ ಗೊಂದಲಗೇರಿ ಮತ್ತು ಅದರ ಸುತ್ತಲ ಹಳ್ಳಿಗಳಲ್ಲಿನ ಸಾಮಾಜಿಕ, ದೈನಂದಿನ ವಿದ್ಯಮಾನಗಳನ್ನು ಅದರೆಲ್ಲ ಸೂಕ್ಷ್ಮಾತಿಸೂಕ್ಷ್ಮ ವಿವರಗಳಲ್ಲಿ ನಿರೂಪಿಸುತ್ತದೆ. ಅಲ್ಲಿನ ರೈತರ ಕೂಲಿಗಳ, ಸಣ್ಣ ವ್ಯಾಪಾರಿಗಳ, ಸರಕಾರಿ ನೌಕರರ ಮಹಿಳೆಯರ ನೋವು–ನಲಿವುಗಳ ವಿವರಗಳಲ್ಲಿ ಪ್ರಕೃತಿ ಮತ್ತು ಸಾಮಾಜಿಕ ಜೀವನವನ್ನು ಲೇಖಕರು ಕಟ್ಟಿಕೊಡುತ್ತಾರೆ.

ಕಿರಗೂರಿನ ಗಯ್ಯಾಳಿಗಳು ಕತೆಯಲ್ಲಿ ಭಯಂಕರ ಬಿರುಗಾಳಿ ಕಿರಗೂರಿನ ಸಾಮಾಜಿಕ ಜೀವನ ವನ್ನು ಅಲ್ಲೋಲ–ಕಲ್ಲೋಲ ಮಾಡುತ್ತದೆ. ಕತೆ ಆರಂಭದಲ್ಲಿ ಭಯಂಕರವಾದ ಬಿರುಗಾಳಿಯಿಂದ ಆರಂಭವಾಗಿ, ಪೂರ್ಣಗೊಂಡಾಗಲೂ ಮುಗಿಯದ ಕತೆಯಾಗಿ ತೋರುತ್ತದೆ. ಇಲ್ಲಿ ಬಿರುಗಾಳಿಗೆ ಬೀಳುವ ಮರ ಅದರ ಬೇರು ಇಡೀ ಊರನ್ನೇ ಸಾಮಾಜಿಕವಾಗಿ ಬದಲಾವಣೆಗೆ ಕೊಂಡೊಯ್ಯುತ್ತದೆ. ಅಲ್ಲಿನ ಸೋಮಾರಿ ಗಂಡಸರನ್ನು ಅವರ ಹಿಂಸೆ, ಬೇಜವಾಬ್ದಾರಿಯನ್ನು ಅಷ್ಟು ದಿನ ಸಹಿಸಿಕೊಂಡಿದ್ದ ಅಲ್ಲಿನ ಮಹಿಳೆಯರು ತೀವ್ರ ಪ್ರತಿಭಟನೆಗಿಳಿಯುವ ಚಿತ್ರಣವಿದೆ.

ಕೃಷ್ಣೇಗೌಡನ ಆನೆಯಲ್ಲಿ ನಾವು ಸಮಕಾಲೀನ ಸಮಾಜದ ಚಿತ್ರಣವನ್ನು ಕಾಣುತ್ತೇವೆ. ಅಲ್ಲಿ ಮನುಷ್ಯ ತಾನು ತಪ್ಪು ಮಾಡಿ ಬೇರೊಬ್ಬರನ್ನು ಹೇಗೆ ಅದಕ್ಕೆ ಗುರಿ ಮಾಡುತ್ತಾನೆ. ಅಲ್ಲಿ ಬದುಕಿನ ಸೂಕ್ಷ್ಮಗಳನ್ನು, ಸಂಕೀರ್ಣ ಸಮಸ್ಯೆಗಳನ್ನು ಅತ್ಯಂತ ಸರಳ ಸುಂದರವಾಗಿ ಲೇಖಕರು ನಿರೂಪಿಸಿದ್ದಾರೆ. ಜೊತೆಗೆ ತಪ್ಪು ಮಾಡದೇ ಅಲ್ಲಿನ ಜನ ಶಿಕ್ಷೆ ಅನುಭವಿಸುತ್ತಾರೆ. ಅದು ಯಾವ ವಿಚಾರಕ್ಕೆಂದು ಅಲ್ಲಿನ ಪೊಲೀಸ್ ಅಧಿಕಾರಿಗೂ ಸಹ ತಿಳಿದಿರುವುದಿಲ್ಲ.

ಸ್ವರೂಪ ಕಿರು ಕಾದಂಬರಿಯಲ್ಲಿ ಸಮಾಜವಾದಿ ಕ್ರಾಂತಿಯ ಬೆನ್ನು ಹತ್ತಿದ ವಿದ್ಯಾವಂತ ವರ್ಗವಾದ ಹೇಮಂತ ಮತ್ತು ಶ್ರೀನಿವಾಸರ ಜೀವನದ ವಿಶ್ಲೇಷಣೆಯಿದೆ. ಹುಲಿಯೂರಿನ ಸರಹದ್ದು ಕತೆಯಲ್ಲಿ ಕೌಟುಂಬಿಕ ಸಾಮಾಜಿಕ ಪರಿಸರವಿದೆ. ಅಲ್ಲಿನ ಸಮಸ್ಯೆಗಳೆಲ್ಲವು ವೈಯಕ್ತಿಕ ಮತ್ತು ಸಾಂದರ್ಭಿಕವಾದವು. ಹಾಗೂ ಅವುಗಳ ನಿವಾರಣೆ ಕೂಡ ಸಾಂದರ್ಭಿಕವಾದವು. ಕತೆಯ ನಾಯಕನ ಸುತ್ತ ಒಂದು ಸಾಮಾಜಿಕ ಚೌಕಟ್ಟು ಇದೆ.

ಕನ್ನಡದ ಬಹುಪಾಲು ಎಲ್ಲ ಹಿರಿ ಕಿರಿಯ ಲೇಖಕರು ತಮ್ಮ ಸಾಮಾಜಿಕ ನಿರೂಪಣೆಗಳ ವಿಜೃಂಭಣೆಯಲ್ಲಿ ತೊಡಗಿದ್ದಾಗ ತೇಜಸ್ವಿ ಮಾತ್ರ ಅಂತಹ ಸೆಳೆತಗಳಿಗೆ ಒಳಗಾಗದೆ ಮನುಷ್ಯರ ಕ್ಷುದ್ರತೆಗಳನ್ನು ಮೀರುವ ಸಾಮಾಜಿಕ ವ್ಯವಸ್ಥೆಯ ಚಿತ್ರಣ ನೀಡಿದರು. ತೇಜಸ್ವಿ ಕಾಡಿನ ನಿಗೂಢ ಜಾಡುಗಳ ಹಾದಿಯಲ್ಲಿ ನಡೆದು ಮನುಷ್ಯ ಸಮಾಜದ ವ್ಯರ್ಥ

ಜೀವನ ವಿಧಾನವನ್ನು ನಿಸರ್ಗದ ಅನುಭಾವದಿಂದ ಬಿಡಿಸಲು ತೊಡಗಿದವರು. ಸಾಮಾಜಿಕ ನಿರೂಪಣೆಗಳ ಗದ್ದಲದಿಂದ ಮರೆಗೆ ಸರಿದ ತೇಜಸ್ವಿ ನಿಗೂಢ ಮೌನದಲ್ಲಿ ಮನುಷ್ಯನ ಸಾಧ್ಯತೆಯನ್ನು ಕಂಡುಕೊಂಡವರು. ಅವರೊಳಗಿನ ಕರ್ವಾಲೊ ಹಾಗೂ ಮಂದಣ್ಣ ಸಾಮಾಜಿಕ ಶಾಪಗಳ ಆಚೆಗಿನವರಾಗಿದ್ದರು. ಅಂತೆಯೇ ಸಾಮಾಜಿಕ ಆಮಿಷಗಳ ಬಲೆಯಿಂದ ಬಿಡಿಸಿಕೊಂಡವರಾಗಿದ್ದು, ವಿಕಾಸದ ಅನಂತ ಮೌನದ ಶೋಧಕರಾಗಿದ್ದರು.

## ಇ) ಪ್ರಕೃತಿ ಮತ್ತು ವೈಚಾರಿಕತೆ :

ವೈಚಾರಿಕತೆ ಎಂದರೆ ಇಲ್ಲಿ ಒಂದು ವಿಚಾರಕ್ಕೆ ಸಂಬಂಧಿಸಿದ್ದೆಂದು ಹೇಳಬಹುದು. ಇಲ್ಲಿ ತೇಜಸ್ವಿ ತಮ್ಮ ಕಥಾ ಸಾಹಿತ್ಯದಲ್ಲಿ ಪ್ರಕೃತಿ ಪಾತ್ರದ ಸಾರ್ಥಕತೆಯನ್ನು ವೈಚಾರಿಕ ಹಿನ್ನೆಲೆಯಲ್ಲಿ ಹೇಗೆ ಬಳಸಿಕೊಂಡಿದ್ದಾರೆಂಬುದನ್ನು ನೋಡಬಹುದು.

ತೇಜಸ್ವಿಯವರು ಸ್ವರೂಪ, ನಿಗೂಢ ಮನುಷ್ಯರು, ಕರ್ವಾಲೊ, ಮಾಯಲೋಕ, ಕಾದಂಬರಿಗಳಲ್ಲಿ ಹೊಸ ಒಳನೋಟವನ್ನು ಹುಡುಕುವುದಿಲ್ಲ. ಏಕೆಂದರೆ, ತೇಜಸ್ವಿ ಅವರ ಒಟ್ಟು ಸಾಹಿತ್ಯಿಕ ಹಾಗೂ ವೈಚಾರಿಕ ಬರವಣಿಗೆಯಲ್ಲಿ ವ್ಯಕ್ತವಾಗುವ ಧೋರಣೆಯೇ ಅತ್ಯಂತ ಹೊಸತನದಿಂದ ಕೂಡಿದ್ದಾಗಿದೆ. ಅವರ ಸೈದ್ಧಾಂತಿಕತೆ ಮತ್ತು ವೈಚಾರಿಕತೆಯಲ್ಲಿ ಗೊಂದಲವಿಲ್ಲ, ದ್ವಂದ್ವವಿಲ್ಲ ಸ್ಪಷ್ಟತೆ ಇದೆ.

ತೇಜಸ್ವಿಯವರ ಸೃಷ್ಟಿಶೀಲ ಸಾಹಿತ್ಯವನ್ನು ಅರ್ಥಮಾಡಿಕೊಳ್ಳಬೇಕಾದರೆ ಅವರ 'ವ್ಯಕ್ತಿ ವಿಶಿಷ್ಟ ಸಿದ್ಧಾಂತ' ಎಂಬ ವೈಚಾರಿಕೆ ಪ್ರಣಾಳಿಕೆಯನ್ನು ಓದಬೇಕು, ಸೃಷ್ಟಿ ಸಾವು, ಪ್ರೇಮ, ಪ್ರಣಯ, ಮದುವೆ, ಸಾಹಿತ್ಯ, ಸಂಸ್ಕೃತಿ, ಸಮಾಜ ಇತ್ಯಾದಿಗಳ ಬಗ್ಗೆ ಈ ಬರಹಗಳಲ್ಲಿ ಅವರ ತಮ್ಮದೇ ಆದ ವಿಶಿಷ್ಟವಾದ ಸಿದ್ಧಾಂತವನ್ನು ಮಂಡಿಸಿದ್ದಾರೆ. ಇದೊಂದೇ ಅವರ ನಿರ್ದಿಷ್ಟ ಉದ್ದೇಶಿತ ವೈಚಾರಿಕ ಕೃತಿ. ಈ ಸಿದ್ಧಾಂತವು ಆಸ್ತಿಕವಾದ, ನಾಸ್ತಿಕವಾದ ಇತ್ಯಾದಿ ಎಲ್ಲಾ ವಾದಕ್ಕಿಂತ ಮೂಲಭೂತವಾದುದು.

ಮೊದಲು ತೇಜಸ್ವಿಗೆ ಪಶ್ಚಿಮದ ವೈಚಾರಿಕತೆ ಪ್ರಭಾವ ಬೀರಿದ್ದನ್ನು ಕಾಣಬಹುದು. ವೈಚಾರಿಕ ಮನೋಧರ್ಮದ ಹಿನ್ನೆಲೆಯಲ್ಲಿ ಸ್ವರೂಪ, ನಿಗೂಢ, ಮನುಷ್ಯರು, ಕರ್ವಾಲೊ, ಚಿದಂಬರ ರಹಸ್ಯ, ಜುಗಾರಿಕ್ರಾಸ್, ಕಿರಗೂರಿನ ಗಯ್ಯಾಳಿಗಳು, ಪರಿಸರದ ಕತೆ ಬರಹಗಳಲ್ಲಿ ವೈಚಾರಿಕತೆಯ ಸಮಸ್ಯೆ, ಸವಾಲುಗಳನ್ನು ತೇಜಸ್ವಿ ಯಾವ ರೀತಿ ಸ್ವೀಕರಿಸಿದ್ದಾರೆ ಎಂಬುದನ್ನು ಕಾಣಬಹುದು.

'ಸ್ವರೂಪ' ಎಂಬ ಕಿರು ಕಾದಂಬರಿಯಲ್ಲಿ ಸಹಜ ಜ್ಞಾನವನ್ನು ವ್ಯಂಗ್ಯಕ್ಕೆ ಗುರಿ ಮಾಡುವುದನ್ನು ಕಾಣಬಹುದು. ಇದು ಸಮಾಜವಾದಿ ಕ್ರಾಂತಿಯ ಬೆನ್ನು ಹತ್ತಿದ ವಿದ್ಯಾವಂತ ವರ್ಗದ ಇತಿಮಿತಿಗಳನ್ನು ವಿಶ್ಲೇಷಿಸುತ್ತದೆ.

ಸ್ವರೂಪ ಮತ್ತು ನಿಗೂಢ ಮನುಷ್ಯರು ಕೃತಿಗಳ ವೈಚಾರಿಕ ಮನೋಧರ್ಮಕ್ಕೂ 'ಕರ್ವಾಲೊ', 'ಚಿದಂಬರ ರಹಸ್ಯ', 'ಜುಗಾರಿಕ್ರಾಸ್', 'ಕಿರಗೂರಿನ ಗಯ್ಯಾಳಿಗಳು', ಮತ್ತು ಪರಿಸರ ಕುರಿತ ಬರಹಗಳಲ್ಲಿನ ಹೊಸ ಸಮಸ್ಯೆ – ಸವಾಲುಗಳನ್ನು ಅವರ ಸಂವೇದನೆ ತನ್ನ ಸಾಂಸ್ಕೃತಿಕ ಜವಾಬ್ದಾರಿಯನ್ನಾಗಿ ಸ್ವೀಕರಿಸುತ್ತದೆ. ಸ್ವಾತಂತ್ರ್ಯ ನಂತರದ ನಮ್ಮ ವಿಧ್ಯಾಭ್ಯಾಸ ಪದ್ಧತಿ ಹುಟ್ಟು ಹಾಕಿದ ಅಸಂಬದ್ಧತೆಗಳನ್ನು ಶಿಕ್ಷಿತ ಮತ್ತು ಅಶಿಕ್ಷಿತರ ನಡುವೆ ಅಂತರಗಳನ್ನೇರ್ಪಡಿಸಿದ ಶೈಕ್ಷಣಿಕ ಪರಿಸರವನ್ನು ಸಾಹಿತ್ಯ ಮತ್ತು ಸಾಂಸ್ಕೃತಿಕ ವಲಯದಲ್ಲಿ ನಿರ್ಮಾಣವಾದ ಪಶ್ಚಿಮದ ಯಾಂತ್ರಿಕ ಅನುಕರಣೆಯನ್ನು ವಿರೋಧಿಸುತ್ತಾರೆ.

ತೇಜಸ್ವಿ ಅವರು ಬರೆಯಲಾರಂಭಿಸಿದಾಗಿನಿಂದ ಇದುವರೆಗಿನ ಅವರ ವೈಚಾರಿಕ ನಿಲುವುಗಳಲ್ಲಿ ಪರಸ್ಪರ ಬದಲಾವಣೆ, ವಿರೋಧ ಭಾಸಗಳನ್ನು ಕಾಣಬಹುದು. ಇಂತಹ ತೇಜಸ್ವಿ ವೈಚಾರಿಕವಾಗಿ ಒಂದು ಶಿಕ್ಷಣ ಪದ್ಧತಿಯನ್ನು ಅವರ ಕೃತಿಗಳಲ್ಲಿ ವ್ಯಂಗ್ಯಕ್ಕೆ ಗುರಿಪಡಿಸುವುದನ್ನು ಕಾಣುತ್ತೇವೆ. ಈ ಎಳೆ ಅವರ ಆರಂಭದ 'ಲಿಂಗಬಂದ' ಕಥೆಯಿಂದ ಹಿಡಿದು ಎಲ್ಲ ಕಡೆಗೂ ಕೂಡ ಸ್ಕೂಲು, ಅಲ್ಲಿನ ಓದು ಮತ್ತು ಬೇರೆ ಪ್ರಪಂಚಕ್ಕಿರುವ ಸಂಬಂಧಗಳೆಲ್ಲವನ್ನು ವ್ಯಂಗ್ಯಕ್ಕೆ ಗುರಿಪಡಿಸುವ ತಂತ್ರವನ್ನು ಕಾಣಬಹುದು.

'ಕರ್ವಾಲೊ' ದಲ್ಲಿ ಮಂದಣ್ಣನ ಸರಳ ಆಸೆಗಳು ಅವನ ಆಳದ ಮನಸ್ಸಿನ ಮುಗ್ಧತೆಯನ್ನು ತೋರಿಸುತ್ತವೆ. ಇಂತಹ ಮುಗ್ಧತೆಯ ಮನುಷ್ಯರನ್ನು ಕಂಡಾಗ ಮಂದಣ್ಣ ನೆನಪಿಗೆ ಬರುತ್ತಾನೆ. ಈ ಮುಗ್ಧನಾದ ಮಂದಣ್ಣ ಪ್ರಕೃತಿಯ ಬಗ್ಗೆ ಗಾಢ ಕುತೂಹಲ ಹೊಂದಿದ್ದಾನೆ. ಅವನಿಗೆ ಕಾಡಿನ ಪ್ರತಿಯೊಂದು ಮರ–ಗಿಡ, ಪಕ್ಷಿ–ಪ್ರಾಣಿ, ವಿಸ್ಮಯಗಳು, ಎಲ್ಲವನ್ನು ತಿಳಿದಿದ್ದ ಅಶಿಕ್ಷಿತನಾಗಿದ್ದಾನೆ. ಮಂದಣ್ಣ ಇಲ್ಲಿ ಹುಟ್ಟು ಪರಿಸರವಾದಿಯಾಗಿದ್ದಾನೆ. ಪ್ರಕೃತಿಯನ್ನು ಸೂಕ್ಷ್ಮವಾಗಿ ಗ್ರಹಿಸುವ ಅದ್ಭುತ ಪ್ರಕೃತಿ ಶಾಸ್ತ್ರಜ್ಞ, ಎಂದು ಕರ್ವಾಲೊ ಹೇಳುತ್ತಾರೆ. ಕರ್ವಾಲೊ ಕೂಡ ಮಂದಣ್ಣನಂತೆ ಹುಳಹುಪ್ಪಟೆ ಪ್ರಾಣಿಗಳನ್ನು ಕಂಡು ಅಧ್ಯಯನ ಮಾಡುವ ಪ್ರತಿಭಾವಂತ, ಇಲ್ಲಿ ಹಾರುವ ಓತಿ ಎಂಬ ವಿಚಾರದ ಬಗ್ಗೆ ವೈಚಾರಿಕವಾಗಿ ಸಂಶೋಧನೆ ಕೈಗೊಳ್ಳುವುದನ್ನು ಕಾಣಬಹುದು.

'ಚಿದಂಬರ ರಹಸ್ಯ'ದಲ್ಲಿ ಏಲಕ್ಕಿ ಬೆಳೆಗೆ ಬರುವ ರೋಗ ಅದಕ್ಕಾಗಿ ಸಂಶೋಧನೆ ಮಾಡುವುದು ಅಲ್ಲಿನ ಮೌಢ್ಯ, ಕಲ್ಪನೆ, ಪತ್ತೆದಾರಿಕೆ ಹುಡುಗರ ಕ್ರಾಂತಿಯ ಕನಸುಗಳು, ಪ್ರತಿಯೊಬ್ಬರ ಆಲೋಚನೆ ಎಲ್ಲವುದರ ನಿರಂತರತೆಯನ್ನು ಕುರಿತ ಸಮಸ್ಯೆಯೂ ಇಲ್ಲಿ ಗಂಭೀರವಾಗಿದೆ. ಇಲ್ಲಿ ವೈಚಾರಿಕತೆಯ ಹುಡುಕಾಟ ಸಾಗುವುದನ್ನು ಕಾಣಬಹುದು.

ಹೀಗೆ ಪ್ರಕೃತಿ ಸಾರ್ಥಕತೆಯ ವಿಶ್ಲೇಷಣೆಯಲ್ಲಿ ಪ್ರಕೃತಿ ಮತ್ತು ವೈಚಾರಿಕತೆಯನ್ನು ಕಾಣಬಹುದಾಗಿದೆ.

**ಈ) ಪ್ರಕೃತಿ ಮತ್ತು ಆರ್ಥಿಕತೆ :**

ಆರ್ಥಿಕ ಹಿನ್ನೆಲೆಯಲ್ಲಿ ಪ್ರಕೃತಿ ಪಾತ್ರದ ಸಾರ್ಥಕತೆಯನ್ನು ನೋಡುವುದಾದರೆ, ಇವರ ಚಿದಂಬರ ರಹಸ್ಯ, ಕರ್ವಾಲೊ, ಜುಗಾರಿಕ್ರಾಸ್, ಕಿರಗೂರಿನ ಗಯ್ಯಾಳಿಗಳು ಇಲ್ಲೆಲ್ಲಾ ಆರ್ಥಿಕತೆಯ ಚಿಂತನೆಯು ಕಂಡು ಬರುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಕೆಸರೂರಿನ ಏಲಕ್ಕಿ ಬೆಲೆಕುಸಿತ ಎಂಬುದು ಆರ್ಥಿಕತೆಯ ಮೇಲೆ ಹೇಗೆ ಪ್ರಭಾವ ಬೀರುತ್ತದೆ ಎಂಬುದಕ್ಕೆ ಇಲ್ಲಿ ಕಾದಂಬರಿಯು ಆರಂಭವಾಗುವ ಮುನ್ನವೇ ಕೆಸರೂರಿನ ಆರ್ಥಿಕತೆಗೆ ತಗುಲಿರುವ ರೋಗ ಉಲ್ಬಣವಾಗುತ್ತಾ ನಡೆದಿದೆ. ಸುಲೇಮಾನ್ ಬೇರಿಗೆ ಕಾಡನ್ನು ಕಡಿಯಲು ಅವಕಾಶ ಕೊಟ್ಟಾಗ ಬೇರಿ ಕಾಡನ್ನು ಬೋಳಿಸಿದ್ದರ ಪರಿಣಾಮವಾಗಿ ಲಂಟಾನಾ ಬೆಳೆದು, ಏಲಕ್ಕಿಯ ಕತ್ತನ್ನು ಹಿಸುಕಿತು. ಅಲ್ಲಿಂದ ಕೆಸರೂರಿನ ಆರ್ಥಿಕ ಅವನತಿ ಪ್ರಾರಂಭವಾಯಿತು. ಇಲ್ಲಿ ಬೇರಿಯ ಕೃತ್ಯ ಏಲಕ್ಕಿಯ ಕತ್ತನ್ನು ಹಿಚುಕುವ ಮೂಲಕ ಕೆಸರೂರಿನ ಸಮಾಜವೇ ಅವನತಿ ಹೊಂದಿತು. ಆದ್ದರಿಂದ ಯಾವುದೇ ಆರ್ಥಿಕ ಅವನತಿಯ ಮೂಲ ಸಾಂಸ್ಕೃತಿಕ ಅಧ:ಪತನವೇ ಆಗುತ್ತದೆ.

ಕೆಸರೂರಿನ ಆರ್ಥಿಕ ಅವನತಿಗೆ ಸಾಂಸ್ಕೃತಿಕ ಅಧ:ಪತನವೇ ಕಾರಣ ಎಂಬ ಅಂಶ ವಿಜ್ಞಾನಿ ಪಾಟೀಲರ ಮಾತಿನಲ್ಲಿ ನೋಡುವುದಾದರೆ, ಕೆಸರೂರಿಗೆ ಕಾದಂಬರಿಯ ಪ್ರಾರಂಭದಲ್ಲೇ ಅವನತಿ ಎಂಬುದು ಸೂಚಿತವಾಗುತ್ತದೆ. ಹೆಸರೇ ಸೂಚಿಸುವಂತೆ ಕೆಸರೂರಿನ ಅವನತಿ ಎಂಬುದು ಅದರ ಹೆಸರಿನಲ್ಲೇ ಅಡಗಿದೆ. ಅಂದರೆ ಅಲ್ಲಿನ ಆರ್ಥಿಕ ಪರಿಸ್ಥಿತಿಯನ್ನು ನಾವು ನೋಡಿದಾಗ ಅಲ್ಲಿ ಅವನತಿಯಿಂದ ಅಧ:ಪತನದ ಕಡೆಗೆ ಊರು ಸಾಗುತ್ತಿದೆ, ಜೊತೆಗೆ ಅಲ್ಲಿಯ ಸಮಸ್ಯೆಗಳು ಪ್ರತಿದಿನದ ಮಾನವನ ಜೀವನದಲ್ಲಿ ತಳುಕು

ಹಾಕಿಕೊಂಡಿರುವುದನ್ನು ಕಾಣಬಹುದು. ಅಲ್ಲಿನ ಏಲಕ್ಕಿ ಬೆಳೆಯ ಕುಸಿತದಿಂದ ಆರ್ಥಿಕ ಪರಿಸ್ಥಿತಿ ಕುಸಿದಿದೆ ಎಂದು ತಿಳಿದಿದ್ದ ಪಾಟೀಲರು ಅದರ ಒಳಹೊಕ್ಕು ನೋಡಿದಾಗ ಅಲ್ಲಿನ ಜನಜೀವನದೊಂದಿಗೆ ಆರ್ಥಿಕ ಪರಿಸ್ಥಿತಿ ಎಂಬುದು ತಳಕು ಹಾಕಿಕೊಂಡಿದೆ ಎಂದು ಪಾಟೀಲರೇ ಹೇಳುವುದನ್ನು ಕಾಣಬಹುದು.

ಜುಗಾರಿಕ್ರಾಸ್ ಕಾದಂಬರಿಯಲ್ಲಿ ಕೂಡ ಆರ್ಥಿಕ ಅಧ:ಪತನವನ್ನು ಕಾಣಬಹುದು. ಜುಗಾರಿಕ್ರಾಸ್ ಪಕ್ಕದ ದೇವಪುರದಲ್ಲಿ ಒಂದು ಕಾಲಕ್ಕೆ ಏಲಕ್ಕಿ ವ್ಯಾಪಾರ ಬಿಟ್ಟರೆ ಹೆಸರು ಹೇಳುವುದಕ್ಕೆ ಸಹ ಮತ್ತೊಂದು ವಹಿವಾಟು ಇರಲಿಲ್ಲ. ಅಂದರೆ ಆರ್ಥಿಕತೆ ಎಂಬುದು ಕೇವಲ ಏಲಕ್ಕಿ ವ್ಯಾಪಾರದ ಮೂಲಕ ಮಾತ್ರ ನಡೆಯುತ್ತಿತ್ತು. ಈ ಕಾದಂಬರಿಯಲ್ಲಿ ಬರುವ ಸುರೇಶ ಎಂ.ಎ. ಪದವೀಧರ. ಕನಸು ಕಾಣುವ ಹುಚ್ಚಾಟದ ಬೆನ್ನುಹತ್ತುವ ಆತನ ಆಸಕ್ತಿ ಅನೇಕ ಆಕಸ್ಮಿಕಗಳಲ್ಲಿ ಅವನನ್ನು ಸಿಕ್ಕಿಸುತ್ತದೆ. ಕುತೂಹಲ ಅವನನ್ನು ಬದುಕಿನಲ್ಲಿ ಎಲ್ಲೆಲ್ಲಿಗೋ ಕರೆದೊಯ್ಯುತ್ತದೆ. ತಂದೆ ಕೊಟ್ಟ ಹತ್ತು ಲಕ್ಷವನ್ನಿಟ್ಟುಕೊಂಡು ಆತ ನೆಮ್ಮದಿಯ ಜೀವನ ನಡೆಸದೆ, ಆ ಹತ್ತು ಲಕ್ಷ ರೂಪಾಯಿಗಳನ್ನು ಕುಡಿಯದೆ, ತಿನ್ನದೆ, ಜುಗಾರಿ ಸಹ ಆಡದೆ ಆತ ಕಳೆದುಕೊಂಡನೆಂದರೆ ಆತನ ಹುಚ್ಚಾಟ ಯಾವ ಬಗೆಯದಿರಬಹುದು. ಇಲ್ಲಿ ಸುರೇಶ ಆರ್ಥಿಕ ಅಧಃಪತನವನ್ನು ಹೊಂದುತ್ತಾನೆ. ಅವನ ತೋಟದಲ್ಲಿ ಏಲಕ್ಕಿ ತಿಂದು ಪಿಕ್ಕೆ ಹಾಕಿದ ಹಕ್ಕಿಗಳಿಂದ ಅಲ್ಲಲ್ಲಿ ಏಲಕ್ಕಿ ಗಿಡಗಳು ಬೆಳೆದು ಅವನ ಆರ್ಥಿಕ ಪರಿಸ್ಥಿತಿ ಅದರಿಂದ ಸುಧಾರಿಸುತ್ತದೆ. ನಂತರ ಏಲಕ್ಕಿ ಮಾರಲು ಪಟ್ಟಣಕ್ಕೆ ಬಂದು ತಮಗೆ ತಿಳಿಯದೇ ಕಾಳದಂಧೆಯ ವ್ಯೂಹದಲ್ಲಿ ಅವರು ಸಿಕ್ಕುವುದನ್ನು ಕಾಣಬಹುದು. ಅಲ್ಲಿ ಏಲಕ್ಕಿ ವ್ಯಾಪಾರ ಮಾಡಿ ಆರ್ಥಿಕವಾಗಿ ಹೆಚ್ಚು ಹಣ ಗಳಿಸಿದರು ಅವರು ಬೇರೊಂದು ಸಮಸ್ಯೆಯಲ್ಲಿ ಸಿಕ್ಕಾಕಿಕೊಂಡು ಬಿಡುಗಡೆ ಹೊಂದುತ್ತಾರೆ.

ಒಟ್ಟಿನಲ್ಲಿ ಈ ಕಾದಂಬರಿಯಲ್ಲಿ ಅರ್ಥ ಸಂಸ್ಕೃತಿಯ ಬೆನ್ನು ಹತ್ತಿ ಹೊರಟಿರುವ ಆಧುನಿಕ ಸಮಾಜದ ವಿಕೃತಿಯನ್ನು ಅದರೊಳಗೆ ಇರುವ ಆರೋಗ್ಯಕರ ಬದುಕಿನ ಸಾಧ್ಯತೆಗಳನ್ನು ತೇಜಸ್ವಿ ಇಲ್ಲಿ ಸೂಚಿಸಿದ್ದಾರೆ.

'ಅಬಚೂರಿನ ಪೋಸ್ಟಾಫೀಸು' ಕತೆಯಲ್ಲಿ ಕೂಡ ಆರ್ಥಿಕತೆಯ ಬಗ್ಗೆ ತಿಳಿಯಬಹುದು. ಪೋಸ್ಟಾಫೀಸಿನ ಆಗಮನವು ಆಧುನಿಕತೆಯನ್ನು ತಿಳಿಸಿದರೆ ಅದರ ಆಗಮನವೇ ಅವನತಿಯನ್ನು ಸೂಚಿಸುತ್ತದೆ. ಪೋಸ್ಟಾಫೀಸು ಬಂದ ಹೊಸದರಲ್ಲಿ ಬೋಬಣ್ಣ ಅಲ್ಪಸ್ವಲ್ಪ ಹಣವನ್ನು ಗಳಿಸುತ್ತಾನೆ ಆರ್ಥಿಕವಾಗಿ ಸಬಲನಾಗುತ್ತಾನೆ. ಆ ಹಣದ ಮದದಿಂದ

ಮೆರೆಯುವಾಗ ಅವನ ಜೀವನದಲ್ಲಿ ಒಂದು ಬಿರುಗಾಳಿ ಎಂಬುದು ಬೀಸಿ ಅವನ ವೈವಾಹಿಕ ಜೀವನವೇ ಅಲ್ಲೋಲ ಕಲ್ಲೋಲವಾಗುವುದರ ಜೊತೆಗೆ ಬೋಬಣ್ಣ ಅಬಚೂರನ್ನೇ ಬಿಟ್ಟು ಒಬ್ಬಂಟಿಗನಾಗಿ ತಲೆಮರೆಸಿಕೊಂಡು ಹೋಗುವುದನ್ನು ಕಾಣಬಹುದು.

'ಕಿರಗೂರಿನ ಗಯ್ಯಾಳಿಗಳು' ಕತೆಯಲ್ಲಿ ಸಹ ನಾವು ಸಾಮಾಜಿಕ ಮತ್ತು ಆರ್ಥಿಕ ಅವನತಿಯನ್ನು ಕಾಣಬಹುದು. ದುಡಿಯಬೇಕಾದ ಗಂಡಸರು ಅಲ್ಲಿ ಕುಡುಕರಾಗಿ, ಬಡಕಲಾಗಿ, ಸೊರಗಿ ಸೋಮಾರಿಗಳಾಗಿರುವುದನ್ನು ಕಾಣಬಹುದು. ಇದಕ್ಕೆ ವ್ಯತಿರಿಕ್ತವಾಗಿ ಅಲ್ಲಿನ ಮಹಿಳೆಯರು ದಷ್ಟಪುಷ್ಟರಾಗಿದ್ದು, ಮನೆಯ ಜವಾಬ್ದಾರಿಗಳನ್ನು ಹೊತ್ತು ನಿಭಾಯಿಸುತ್ತಾ ಬರುತ್ತಾರೆ. ಅಲ್ಲಿಯ ಪ್ರಕೃತಿಯ ಬಿರುಗಾಳಿಯು ಒಮ್ಮೆ ಬೀಸಿ ಹೇಗೆ ಜನರ ಜೀವನದಲ್ಲಿ ಬದಲಾವಣೆಯನ್ನು ತರುತ್ತದೆ ಎಂಬುದನ್ನು ಕಾದಂಬರಿ ಚಿತ್ರಿಸುತ್ತದೆ. 'ಕೃಷ್ಣೇಗೌಡನ ಆನೆ' ಕತೆಯಲ್ಲಿ ಆನೆಯ ಮಾಲೀಕ ಮಠದಿಂದ ಆ ಆನೆಯನ್ನು ಕೊಂಡು ತಂದು ನಂತರ ಅದಕ್ಕೆ ಚೆನ್ನಾಗಿ ತಿಂಡಿ ನೀಡಿ ತನ್ನ ಹಲವಾರು ವ್ಯವಹಾರಗಳಿಗೆ ಬಳಸಿಕೊಂಡು ಅದರ ಸಹಾಯದಿಂದ ಆರ್ಥಿಕವಾಗಿ ಸಬಲತೆಯನ್ನು ಪಡೆಯುವುದನ್ನು ಈ ಕತೆ ಒಳಗೊಂಡಿದೆ.

ಅಷ್ಟರಲ್ಲಾಗಲೇ ಕೃಷ್ಣಪ್ಪ ಆನೆಯನ್ನು ಕೊಂಡು ತರುವ ಮೊದಲು ಆರ್ಥಿಕವಾಗಿ ನಷ್ಟವನ್ನು ಅನುಭವಿಸಿರುತ್ತಾನೆ. ಆನೆ ತಂದ ನಂತರ ಅದಕ್ಕೆ ಸೊಪ್ಪು, ಹಸಿಹುಲ್ಲು, ಹಿಂಡಿ, ಬೆಲ್ಲ, ಗೆಣಸು ಎಲ್ಲ ಕೊಟ್ಟು ಚೆನ್ನಾಗಿ ಸಾಕಿ ಬೆಳೆಸಿ ಅದರಿಂದ ಮರದ ದಿಮ್ಮಿಗಳನ್ನು ಎಳಸಿ ತಂದು ಅದರ ಬಾಡಿಗೆಯಿಂದ ಬಂದ ಲಾಭದಿಂದ ಮತ್ತೇ ಕೃಷ್ಣಪ್ಪ ಹಣದ ಮುಖವನ್ನು ಕಾಣುವುದು ಆರ್ಥಿಕವಾಗಿ ಭದ್ರತೆಯನ್ನು ಆನೆ ಹೊಂದುತ್ತಾನೆ. ಇಲ್ಲಿ ಅವನ ಆರ್ಥಿಕ ಪರಿಸ್ಥಿತಿ ಸುಧಾರಿಸುವುದನ್ನು ಕೃಷ್ಣೇಗೌಡನ ಆನೆ ಕಟ್ಟಿಕೊಡುತ್ತದೆ.

'ಕರ್ವಾಲೊ' ಕಾದಂಬರಿಯಲ್ಲೂ ಸಹ ನಾವು ಆರ್ಥಿಕತೆಯ ಬಗ್ಗೆ ತಿಳಿಯಬಹುದಾಗಿದೆ. ಅಲ್ಲಿನ ಮಂದಣ್ಣನ ಆಸೆ ಮ್ಯಾರೇಜ್ ಆಗುವುದು, ಆದರೆ ಅವನು ಇಷ್ಟಪಟ್ಟ ಹುಡುಗಿಯ ಅಪ್ಪ ಇವನಿಗೆ ಯಾವ ಒಂದು ಕೆಲಸವು ಇಲ್ಲ ಎಂದು ಹೆಣ್ಣನ್ನು ಕೊಡಲು ನಿರಾಕರಿಸುತ್ತಾನೆ. ಅಂದರೆ ಜೀವನ ನಡೆಸಲು ಒಂದು ಉದ್ಯೋಗ ಅದರಿಂದ ಬರುವ ಹಣ ಮುಖ್ಯ ಎಂಬುದು ಆ ಹುಡುಗಿಯ ಅಪ್ಪನ ಮಾತಿನಲ್ಲಿ ವ್ಯಕ್ತವಾಗುವುದನ್ನು ನಾವು ಕಾಣಬಹುದು. ಆಗಾಗಿ ಮಂದಣ್ಣನ ಅನಿವಾರ್ಯತೆ ಎಂದರೆ ಒಂದು ಕೆಲಸವನ್ನು ಹುಡುಕಿಕೊಳ್ಳುವುದಾಗಿತ್ತು. ಆಗಾಗಿ ಮಂದಣ್ಣ ಕರ್ವಾಲೊ

ಅವರ ಬಳಿ ಒಂದು ಪೀವನ್ ಕೆಲಸವನ್ನು ಕೊಡಿ ಎಂದು ಕೇಳುವುದನ್ನು ಕಾಣಬಹುದು. ಇಲ್ಲಿ ಹಣ ಎಂಬುದು ಎಲ್ಲರ ವೈಯಕ್ತಿಕ ಜೀವನದಲ್ಲಿ ಪ್ರಮುಖ ಪಾತ್ರ ವಹಿಸುತ್ತದೆ ಎಂಬುದನ್ನು ಕಾಣಬಹುದಾಗಿದೆ.

'ತುಕ್ಕೋಜಿ' ಕತೆಯಲ್ಲಿ ಕೂಡ ಆರ್ಥಿಕತೆಯ ಅಂಶವನ್ನು ಕಾಣಬಹುದು. ತುಕ್ಕೋಜಿ ಒಬ್ಬ ದರ್ಜಿ, ಅವನು ಆ ಊರಿನಲ್ಲೇ ಪ್ರಸಿದ್ಧ ದರ್ಜಿಯಾಗಿರುತ್ತಾನೆ. ಅದರಿಂದ ಒಳ್ಳೆಯ ಹಣವನ್ನು ಸಂಪಾದಿಸುತ್ತಿರುತ್ತಾನೆ. ಅದಕ್ಕೆ ಸಹಾಯಕಳಾಗಿ ಅವನ ಹೆಂಡತಿ ಸರೋಜ ಇರುತ್ತಾಳೆ. ಇವರಿಗೆ ಒಂದು ಮಗುವಾದ ನಂತರ ಮಗುವಿನ ಲಾಲನೆ-ಪಾಲನೆಯಲ್ಲಿ ಸರೋಜ ತನ್ನ ಗಂಡನಿಗೆ ಸಹಾಯಮಾಡಲು ಸಾಧ್ಯವಾಗದ ಸ್ಥಿತಿಯಲ್ಲಿ ಅವರ ಆರ್ಥಿಕ ಪರಿಸ್ಥಿತಿ ಅವನತಿಯ ಹಾದಿ ಹಿಡಿಯುತ್ತದೆ. ಏಕೆಂದರೆ ತುಕ್ಕೋಜಿ ಒಬ್ಬನೇ ಅಲ್ಲಿನ ಪರಿಸ್ಥಿತಿಯನ್ನು ನಿಭಾಯಿಸಲು ಸಾಧ್ಯವಾಗದಿರುವುದನ್ನು ಕಾಣಬಹುದು.

ಹೀಗೆ ನಾವು ತೇಜಸ್ವಿ ಕಥಾಸಾಹಿತ್ಯದಲ್ಲಿ ಪ್ರಕೃತಿ ಪಾತ್ರದ ಸಾರ್ಥಕತೆಯನ್ನು ಪ್ರಕೃತಿ ಮತ್ತು ಆರ್ಥಿಕತೆಯ ಹಿನ್ನೆಲೆಯಲ್ಲಿ ಕಾಣಬಹುದಾಗಿದೆ. ಪ್ರತಿ ಮಾನವನ ಜೀವನದಲ್ಲೂ ಹಣ ಪ್ರಮುಖ ಪಾತ್ರ ವಹಿಸುತ್ತದೆ ಎಂಬುದು ಇಲ್ಲಿ ಮುಖ್ಯವಾಗುತ್ತದೆ.

**ಉ) ಪ್ರಕೃತಿ ಮತ್ತು ಧರ್ಮ:**

ತೇಜಸ್ವಿಯವರ ಕೃತಿಗಳನ್ನು ಗಮನಿಸಿದ್ದೇ ಆದರೆ ಅವರು ಯಾವುದೇ ಗೊಡ್ಡು ಸಂಪ್ರದಾಯಗಳಿಗೆ ತಮ್ಮನ್ನು ತಾವು ಕಟ್ಟಿ ಹಾಕಿಕೊಳ್ಳದೆ ಅದರ ವಿರುದ್ದ ಸಡ್ಡು ಹೊಡೆದು ನಿಂತು ಸಮಾಜದಲ್ಲಿ ನಡೆಯುತ್ತಿರುವ ವಾಸ್ತವ ಸತ್ಯಗಳನ್ನು ತಮ್ಮ ಕಥೆ ಕಾದಂಬರಿಗಳಲ್ಲಿ ಒಡಮೂಡಿಸಿ ಆ ಮೂಲಕ ಸಮಾಜದಲ್ಲಿ ಬದಲಾವಣೆಯನ್ನು ಬಯಸಲು ಹೊರಟಿದ್ದಾರೆ. ಧರ್ಮದ ಪರಿಕಲ್ಪನೆ ಏನು? ಎಂಬುದನ್ನು ಸೂಕ್ಷ್ಮವಾಗಿ ಅರಿತಿದ್ದ ತೇಜಸ್ವಿಯವರು ಧರ್ಮದ ಸ್ಥಾನದಲ್ಲಿ ಪರಿಸರವನ್ನು ಇಟ್ಟು ನೋಡುವ ಪ್ರಯತ್ನ ಮಾಡಿದ್ದಾರೆ.

ತೇಜಸ್ವಿಯವರ ಚಿದಂಬರ ರಹಸ್ಯ ಕಾದಂಬರಿಯಲ್ಲಿ ಪರಿಸರ, ಧರ್ಮ, ಜಾತಿ, ಸಮಾಜದ ವ್ಯವಸ್ಥೆ ಮುಂತಾದವುಗಳ ಬಗ್ಗೆ ವಾಸ್ತವ ಸತ್ಯಗಳನ್ನು ತಿಳಿಯಲು ಹೊರಟಿದ್ದಾರೆ. ಇಲ್ಲಿ ಬರುವ ಕೆಸರೂರು ಏಕಕಾಲದಲ್ಲಿ ಧಾರ್ಮಿಕ ನೆಲೆಯಲ್ಲಿ ಸಾಂಸ್ಕೃತಿಕ ನೆಲೆಯಲ್ಲಿ, ಪ್ರಾಕೃತಿಕ ನೆಲೆಯಲ್ಲಿ, ಸಾಮಾಜಿಕ ನೆಲೆಯಲ್ಲಿ ಹೇಗೆ ಅವನತಿಯ ಹಾದಿಯನ್ನು ಹಿಡಿದಿದೆ ಎಂಬುದನ್ನು ಕಾಣಬಹುದು. ಕೆಸರೂರಿನಲ್ಲಿ ವಿಚಾರವಾದಿಗಳ ಗುಂಪಿರುತ್ತದೆ. ಅವರುಗಳಲ್ಲಿ ಜಯರಾಮು, ಶಾಮನಂದನ ಅಂಗಾಡಿ, ರಾಮಚಂದ್ರ, ಬ್ರೀಡರ್ ಮಹಮದ್ ಇವರುಗಳು

ಸಮಾಜದಲ್ಲಿ ಬದಲಾವಣೆ ತರಲು ಬಯಸುತ್ತಿದ್ದರೂ, ಕೂಡ ಮತೀಯವಾದದ ಪರಾಕಾಷ್ಠೆ ಕೆಸರೂರಿನ ಅವನತಿಗೆ ಕಾರಣವಾಗುತ್ತದೆ. ಅದೇ ರೀತಿ ಆ ಊರಿನಲ್ಲಿದ್ದ ಯುವಕರ ತಂಡ ಕೂಡ ಅಲ್ಲಿ ಯಾವಾಗಲೂ ಕ್ರಾಂತಿ ನಡೆಯಬೇಕೆಂದು ಬಯಸುವುದನ್ನು ಕಾಣಬಹುದು. ಆ ಯುವಕರು ಅಲ್ಲಿ ಅನ್ಯಾಯದ ವಿರುದ್ದ ಕ್ರಾಂತಿ ಮಾಡುವ ಯೋಚನೆ ಮಾಡುತ್ತಾರೆ. ಅವರಲ್ಲಿ ಧಾರ್ಮಿಕವಾಗಿ ತಾವು ಬೇರೆ ಬೇರೆ ಅಲ್ಲ ಎಂಬ ಭಾವನೆಯನ್ನು ಹೊಂದಿದ್ದರು. ಇಲ್ಲಿ ಬರುವ ವೆಂಕಟೇಶ್ವರನ ದೇವಾಲಯ ಮತ್ತು ಮುಸ್ಲೀಂ ರ ಮಸೀದಿಯ ಮೈಕುಗಳು ಒಂದು ಸಮಾಜದ ಸಂಘರ್ಷಕ್ಕೆ ಎಡೆಮಾಡಿ ಕೊಟ್ಟಿರುವುದರ ಜೊತೆಗೆ ಧರ್ಮ ಧರ್ಮದ ನಡುವಿನ ಕಚ್ಚಾಟವನ್ನು ತಿಳಿಸುತ್ತದೆ. ಪ್ರತಿಯೊಂದು ಜಾತಿಯೂ ಇಲ್ಲಿನ ಒಂದು ಸಂಘರ್ಷಕ್ಕೆ ತಳಕುಹಾಕಿಕೊಂಡಿದೆ. ಇಲ್ಲಿ ಒಕ್ಕಲಿಗರು ಮತ್ತು ಅಸ್ಪೃಶ್ಯರ ನಡುವಿನ ಸಂಘರ್ಷವನ್ನು ಉಪಯೋಗಿಸಿಕೊಂಡ ಸುಲೇಮಾನ್ ಬೇರಿಯಂತವರು ತಮ್ಮ ಸ್ವಾರ್ಥ ಸಾಧನೆಗಾಗಿ ಇದೇ ಸಮಾಜ ಮತ್ತು ಪರಿಸರವನ್ನು ಬಳಸಿಕೊಳ್ಳುವುದು ಸಹ ಇಲ್ಲಿ ಪ್ರಮುಖವಾಗುತ್ತದೆ.

ಇಲ್ಲಿ ಹೊಸ ತಲೆಮಾರು ಮತ್ತು ಹಳೆತಲೆಮಾರಿನ ಜನರ ನಡುವೆ ಸಂಘರ್ಷ ಉಂಟಾಗುತ್ತದೆ, ಕೃಷ್ಣಪ್ಪ, ರಾಮಾಚಾರಿ, ಆಚಾರಿ, ವೆಂಕಟರಾಮ ಇವರು ಗೊಡ್ಡು ಸಂಪ್ರದಾಯಗಳಿಗೆ ಕಟ್ಟುಬಿದ್ದು ಜಾತಿ ಜಾತಿಗಳ ನಡುವೆ ವೈಷಮ್ಯ ಏರ್ಪಡಿಸುವುದರ, ಮೂಲಕ ಇಡೀ ಕೆಸರೂರಿನ ಅವನತಿಗೆ ಕಾರಣಕರ್ತರಾಗಿದ್ದಾರೆ. ಇದರ ವಿರುದ್ಧ ಸಮಾಜದ ತರುಣರಾದ ರಾಮಪ್ಪ, ಚಂದ್ರ, ಅಂಗಾಡ, ರಮೇಶ ಇವರುಗಳು ಕ್ರಾಂತಿ ನಡೆಸುವ ಪ್ರಯತ್ನ ಮಾಡುತ್ತಾರೆ.

'ಕರ್ವಾಲೊ' ಕಾದಂಬರಿಯಲ್ಲೂ ಕೂಡ ನಾವು ಧರ್ಮದ ಪರಿಕಲ್ಪನೆಯನ್ನು ಕಾಣಬಹುದು. ಈ ಕಾದಂಬರಿಯ ಪಾತ್ರಗಳು ಒಂದೇ ಸ್ತರದಿಂದ ಬಂದಿದ್ದರೂ, ಅವುಗಳ ವರ್ಗಗಳು, ಜಾತಿಗಳು ಬೇರೆಬೇರೆ, ಅನುಸರಿಸುವ ರೀತಿ–ನೀತಿಗಳು, ಜೀವನ ಧರ್ಮಗಳು, ಧೋರಣೆಗಳು ಬೇರೆಬೇರೆ, ಬಿರ್ಯಾನಿ ಕರಿಯಪ್ಪನು ಈ ಭೂಮಿಯ ಮೇಲಿನ ಸೃಷ್ಟಿ, ಪ್ರಾಣಿ, ಪಕ್ಷಿ, ಮರ–ಗಿಡ, ಝುರಿ ಇವೆಲ್ಲಾ ದೇವರ ಸೃಷ್ಟಿ ಎಂದು ಹೇಳುತ್ತಾನೆ. ಇಲ್ಲಿ ಇವನ ಬುದ್ಧಿಮಟ್ಟಕ್ಕೆ ಎಟುಕುವ ದೇವರು ಒಂದು ಬಗೆಯಾದರೆ, ಸಾಕ್ಷಿ ಅಧಾರಗಳಿಲ್ಲದೇ ಯಾವುದನ್ನು ನಂಬುವುದಿಲ್ಲ. ದೇವರನ್ನು ನಂಬೋದು, ಬಿಡೋದು ನಿರುಪಯುಕ್ತ ಎಂದು ಹೇಳುವ ಕರ್ವಾಲೊ ತಿಳುವಳಿಕೆ ಒಂದು ಕಡೆ. ಅಲ್ಲಿ ಕರಿಯಪ್ಪ ಮತ್ತು ಕರ್ವಾಲೊ ನಡುವೆ ಚರ್ಚೆ ನಡೆಯುತ್ತದೆ. ದೇವರಿಲ್ಲ ಎನ್ನುವುದಾದರೆ

ಭೂಮಿಯಲ್ಲಿ ಇಷ್ಟೊಂದು ವಿಚಿತ್ರಗಳು, ಏಕಿರಬೇಕು, ಭೂಮಿಯಲ್ಲಿರುವ ಅನೇಕ ಪ್ರಾಣಿ, ಪಕ್ಷಿ, ಹುಳು, ಹುಪ್ಪಟೆ ಇವು ಸಾವಿರಾರು ಮೈಲಿ ದೂರ ಹೋಗಿ ಕೂಡ ಅವು ವಾಪಸ್ಸು ಬರುವುದನ್ನು ಕಾಣಬಹುದಾಗಿದೆ. ಎಲೆ ಹುಳು ಎಲೆಯಲ್ಲಿ ಮೊಟ್ಟೆ ಇಟ್ಟು ಅದನ್ನು ಸುತ್ತಿ ಬಿಸಾಡುವುದನ್ನು ನೋಡಿದಾಗ ದೇವರಿಲ್ಲ ಎನ್ನುವುದು ಹೇಗೆ, ಜೊತೆಗೆ ಗೋಸುಂಬಿ ಕ್ಷಣಕ್ಷಣಕ್ಕೂ ಬಣ್ಣ ಬದಲಾಯಿಸುವುದು ಇವೆಲ್ಲವನ್ನು ನೋಡಿದರೆ ದೇವರಿಲ್ಲ ಎಂದು ಹೇಳಲು ಹೇಗೆ ಸಾಧ್ಯ ಎಂದು ಹೇಳುವ ಸಂದರ್ಭ ಕಾಣಬಹುದು.

ಇಲ್ಲಿ ದೇವರು, ದೈವ, ಅಸ್ತಿತ್ವದ ಬಗ್ಗೆ ಇಲ್ಲಿ ನಿರೂಪಕ ಮತ್ತು ಕರ್ವಾಲೊ ದೀರ್ಘವಾಗಿ ಚರ್ಚಿಸಿದ್ದಾರೆ. ಕೊನೆಗೆ ಜೀವಸಂಕಲನದ ಬಗ್ಗೆ ಚರ್ಚಿಸುತ್ತಾರೆ. ಜುಗಾರಿಕ್ರಾಸ್ ನಲ್ಲೂ ಸಹ ಧರ್ಮದ ಪರಿಕಲ್ಪನೆಯನ್ನು ಕಾಣಬಹುದು. ಒಂದು ಸಮಾಜ ಅಂದ ಮೇಲೆ ಅಲ್ಲಿ ಧರ್ಮ, ರಾಜಕೀಯ ಆರ್ಥಿಕ ಜೀವನವೆಲ್ಲವನ್ನು ಕಾಣಬಹುದು. ಹಾಗೇ ಇಲ್ಲೂ ಕೂಡ ಇರುವ ಬಹುಪಾಲು ಜನ ಧರ್ಮಶ್ರದ್ಧೆ ಉಳ್ಳವರು, ಆಧ್ಯಾತ್ಮವಾದಿಗಳು, ತಿರುಪತಿ, ಅಯ್ಯಪ್ಪಸ್ವಾಮಿ, ಧರ್ಮಸ್ಥಳ ಈ ಎಲ್ಲಾ ಕಡೆಗೂ ಹೋಗಿ ತಮ್ಮ ತಪ್ಪಿಗಾಗಿ ಹರಕೆ ಒಪ್ಪಿಸಿ ಬರುವಂತವರು. ಅವರು ದೇವರಲ್ಲಿ ನಂಬಿಕೆ ಇಟ್ಟಿದ್ದು, ಅದಕ್ಕೆ ಅವರಿಗೆ ಮಟ್ಕಾ, ಜೂಜು, ಲಾಟ್ರಿ, ಸಟ್ಟಾಗಳೆಲ್ಲ ಊರಿಗೆ ಕಾಲಿಟ್ಟಾಗ ಅವೆಲ್ಲ ಧಾರ್ಮಿಕ ಜೀವನದ ವಿಸ್ತರಣೆಗಳಂತೆ ಅಲ್ಲಿಯ ಜನ ತಿಳಿದಿದ್ದರು.

ಚಿದಂಬರ ರಹಸ್ಯದ ಪಾಟೀಲರು ಓರ್ವ ವಿಜ್ಞಾನಿ ಅವರಿಗೆ ಮಾಯಾಮಂತ್ರ ಗಳಲ್ಲಾಗಲೀ, ಪೂಜೆ, ಪುನಸ್ಕಾರ, ದೇವರು–ದಿಂಡರು ದೆವ್ವ–ಭೂತ ಯಾವುದರಲ್ಲಿಯೂ ನಂಬಿಕೆ ಇಲ್ಲ. ವೆಂಕಟೇಶ್ವರನ ಭಕ್ತರು ಅವರನ್ನು ದೈವವಿರೋಧಿ, ನಾಸ್ತಿಕ ಎಂದೆಲ್ಲ ಹೀಯಾಳಿಸುತ್ತಾರೆ. ಧರ್ಮದ ಹೆಸರಿನಲ್ಲಿ ಕಚ್ಚಾಡುವ ಆ ಊರವರ ದೃಷ್ಟಿಯಲ್ಲಿ ಅವರು ಶತ್ರು ಪಾಳಯಕ್ಕೆ ಸೇರಿದವರು ಎಂದು ಗುಮಾನಿ ಪಡುತ್ತಿದ್ದರು. ಅವರ ವ್ಯಕ್ತಿತ್ವದ ಇನ್ನೊಂದು ಆಯಾಮ ಎಂದರೆ ಪಾಟೀಲರು ಚೇಳಿಗೆ ಮಂತ್ರ ಚಿಕಿತ್ಸೆ ಮಾಡುತ್ತಾರೆ. ಒಂದು ಕಡ್ಡಿ ತೆಗೆದುಕೊಂದು ಚೇಳು ಕಚ್ಚಿದ ಜಾಗದ ಮೇಲೆ ಬರೆದಾಗ ವಿಷ ಕೆಳಗೆ ಇಳಿಯುತ್ತದೆ. ಇದರ ಬಗ್ಗೆ ಸ್ವಂತಃ ಪಾಟೀಲರಿಗೆ ನಂಬಿಕೆ ಇಲ್ಲ. ಅವರೂರಿನಲ್ಲಿ ಯಾರೋ ಮಾಂತ್ರಿಕ ಈ ರೀತಿ ಮಾಡುತ್ತಿದ್ದು ಅದನ್ನು ಮೂಢನಂಬಿಕೆ ಎಂದು ಸಾಧಿಸೋದಿಕ್ಕೆ ಇವರು ಹಾಗೆ ಮಾಡಿದರಂತೆ, ಅದೇ ರೀತಿ ಮಾಂತ್ರಿಕ ಹೇಳಿದಂತೆ ದೆಯ್ಯ, ದೇವರ ಅಗತ್ಯ ಇಲ್ಲ ಎಂದು ಅವರು ಸಾಧಿಸಿದರು. ಆದರೆ ಚೇಳು ಕಚ್ಚಿಸಿಕೊಂಡವರು ಚಿಕಿತ್ಸೆಗಾಗಿ ಇವರ ಹತ್ರ ಬರೋದಕ್ಕೆ ಪ್ರಾರಂಭ ಮಾಡಿದ್ದನ್ನು

ಕಾಣಬಹುದು. ಕೆಸರೂರಿನಲ್ಲಿ ಇವರನ್ನು ಮಂತ್ರವಾದಿಗಳು ಎಂದು ತಿಳಿದ ಕೆಲವು ಜನ ಹಾವು ಕಚ್ಚಿಸಿಕೊಂಡವರು, ದೆವ್ವ ಮೈಮೇಲೆ ಬರೋರು, ಮತಿಭ್ರಾಂತರು ಎಲ್ಲರನ್ನು ಕರಕೊಂಡು ಬರೋದಿಕ್ಕೆ ಶುರು ಮಾಡಿದಾಗ, ಪಾಟೀಲರು ನಾನು ಯಾವ ಶಕ್ತಿಯ ಆರಾಧಕನೂ ಅಲ್ಲ, ಮಂತ್ರವಾದಿಯೂ ಅಲ್ಲ ಎಂದು ಜನಕ್ಕೆ ಹೇಳಿ ಕಳುಹಿಸುವಲ್ಲಿ ಸುಸ್ತಾಗಿ ಹೋಗಿದ್ದರಂತೆ.

ಕೊನೆಗೆ ಇವರನ್ನು ಒಲಿಸಿಕೊಳ್ಳಲು ಒಂದು ಪ್ರಯತ್ನ ನಡೆಯುತ್ತದೆ. ಪಾಟೀಲರು ಜೂನಿಯರ್ ಕಾಲೇಜಿನ ಫಂಕ್ಷನ್‌ಗೆಂದು ಹೋಗಿದ್ದಾಗ ಹೇಗಾದರೂ ಮಾಡಿ ಪಾಟೀಲರನ್ನು ಬುಟ್ಟಿಗೆ ಹಾಕಿಕೊಳ್ಳಬೇಕೆಂದು ಪ್ರಯತ್ನಿಸುವ ಹಿಂದೂವಾದಿಗಳನ್ನು ಕಾಣಬಹುದು. ಆಗ ಪಾಟೀಲರು ನೋಡಿ ನಾನು ಮಾಯಾ–ಮಂತ್ರ ಮಾಡೋ ವಿಜ್ಞಾನಿ ಅಲ್ಲ, ಚೇಳು ಮಂತ್ರ ಒಂದು ಬಗೆಯ ಚಿಕಿತ್ಸೆ ಅಷ್ಟೇ, ಅದರ ಸತ್ಯಾಸತ್ಯತೆಗಳನ್ನು ವೈಜ್ಞಾನಿಕವಾಗಿ ತಿಳಿದುಕೊಳ್ಳಬೇಕಾದ್ದು ನಮ್ಮ ನಿಮ್ಮೆಲ್ಲರ ಕರ್ತವ್ಯ. ನನಗೆ ಪೂಜೆ, ಪುನಸ್ಕಾರ, ದೇವರು, ಸಂತರ್ಪಣೆ ಯಾವುದರಲ್ಲೂ ನಂಬಿಕೆ ಇಲ್ಲ ಎಂದು ಹೇಳುತ್ತಾರೆ. ಚಿದಂಬರ ರಹಸ್ಯ ಕಾದಂಬರಿಯಲ್ಲಿ ಧಾರ್ಮಿಕ ಮತಾಂಧತೆ ಹಣದ ಬಗೆಗಿನ ವ್ಯಾಮೋಹಗಳು ಸಮಷ್ಟಿ ಬದುಕನ್ನೇ ಲಂಟಾನಾ ರಾಕ್ಷಸನ ಬಾಯಿಗೆ ಆಹುತಿ ಮಾಡುವ ದುರಂತವನ್ನು ಕಾದಂಬರಿ ತನ್ನಲ್ಲಿಟ್ಟು ಕೊಂಡಿದೆ.

'ಹುಲಿಯೂರಿನ ಸರಹದ್ದು' ಕಥೆಯಲ್ಲೂ ಸಹ ನಾವು ಧರ್ಮದ ಪರಿಕಲ್ಪನೆಯನ್ನು ಕಾಣಬಹುದು. ಪ್ರಕೃತಿಯ ಜೀವಿಯಾದ ಗರುಡ ಪಕ್ಷಿಯನ್ನು ಆ ಕತೆಯ ನಾಯಕ ಸೋಮು ದೇವರೆಂದು ನಂಬಿರುತ್ತಾನೆ. ಅದು ವಿಷ್ಣುವಿನ ವಾಹನ ಅದನ್ನು ಕೊಲ್ಲು ಎಂದು ತಂದೆ ಹೇಳಿದಾಗ ಅದು ಬೇಕಾದರೆ ಅಪ್ಪ, ಅಮ್ಮ, ಮನೆಯನ್ನೆಲ್ಲಾ ಒತ್ತುಕೊಂಡು ಹೋಗಲಿ, ಇಡೀ ಊರನ್ನೇ ನಾಶ ಮಾಡಲಿ, ಆದರೆ ನಾನು ಅದನ್ನು ಕೊಲ್ಲುವುದಿಲ್ಲ, ಕೊಂದು ಯಾವ ನರಕಕ್ಕೆ ಹೋಗಲಿ ಎಂದು ಹೇಳುತ್ತಾನೆ.

ಸೋಮು ಶ್ರೀಮನ್ನಾರಾಯಣನನ್ನು ಹೊತ್ತ ಗರುಡ ದೇವರು ಎಂದು ತನಗೆ ತಾನೇ ಭಾವಿಸಿ ಕೊಳ್ಳುವುದನ್ನು ಕಾಣಬಹುದು. ಇಲ್ಲಿ ಸೋಮುವಿಗೆ ಮನೆಯ ಆಳು ಲಿಂಗ ಆತ್ಮದ ಬಗ್ಗೆ ಒಂದು ಪರಿಕಲ್ಪನೆಯನ್ನು ನೀಡುತ್ತಾನೆ. ನಾವು ಸತ್ತ ಮೇಲೆ ನಮ್ಮ ಆತ್ಮಗಳನ್ನು ಹೊತ್ತು ಸ್ವರ್ಗ ಸೇರಿಸೋದು ಗರುಡ ದೇವರು, ಗರುಡ ದೇವರನ್ನು ಕೊಂದರೆ ರಣಬಿಸಿಲಿನಲ್ಲಿ ಕೆಳಗೆ ಕೆಂಡ ಕೆಂಡದ ಮರಳು, ಕುಡಿಯೋದಿಕ್ಕೆ ಒಂದು

ತೊಟ್ಟು ನೀರಿಲ್ಲ ಆ ಮೂಲಕ ನಾವು ನರಕಕ್ಕೆ ಹೋಗುತ್ತೇವೆ. ಅಲ್ಲಿ ನಾವು ಚಿತ್ರಹಿಂಸೆಗಳನ್ನು ಅನುಭವಿಸಬೇಕಾಗುತ್ತದೆ ಎಂದು ಹೇಳಿ ಇನ್ನಷ್ಟು ಭಯವನ್ನು ಉಂಟು ಮಾಡಿರುತ್ತಾನೆ.

ತನ್ನ ಮಗ ತನ್ನ ಮಾತನ್ನು ಮೀರಬಾರದು ನನಗೆ ವಿಧೇಯನಾಗಿರಬೇಕೆಂದು ಭಾವಿಸುವ ತಂದೆ, ಬೇರೆ ಜಾತಿಯ ಹುಡುಗಿಯಾದ ನಳಿನಾಕ್ಷಿಯನ್ನು ಮದುವೆಯಾಗಲು ಬಿಡದಿರುವುದನ್ನು ಕಾಣಬಹುದು. ಇದೆಲ್ಲದರಿಂದ ಬೇಸತ್ತ ಕಥೆಯ ನಾಯಕ ಆ ಊರಿನ ಸರಹದ್ದನ್ನು ಮೀರುವ ಪ್ರಯತ್ನದಲ್ಲಿರುತ್ತಾನೆ. ಆಗ ಅನಿರೀಕ್ಷಿತಾಗಿ ಒದಗಿ ಬಂದ ಒಂದು ಸಂದರ್ಭವೆಂದರೆ ಅವನು ಕೊನೆಗೆ ದೇವರೆಂದು ನಂಬಿದ್ದ ಆ ಗರುಡ ಪಕ್ಷಿ ಕೋಳಿ ಮರಿಯನ್ನು ಎತ್ತು ಒಯ್ಯುವಾಗ ಅದನ್ನು ಹೆದರಿಸಲು ಹೋದ ಸೋಮುವಿನ ಕೈಯನ್ನು ತನ್ನ ಚೂಪಾದ ಉಗುರುಗಳಿಂದ ಹಿಡಿದುಕೊಳ್ಳುವುದನ್ನು ಕಾಣಬಹುದು. ಆಗ ಸೋಮು ದೇವರು ಎಂದ ನಂಬಿದ್ದ ಗರುಡವನ್ನು ಅದರ ಕತ್ತನ್ನು ಹಿಚುಕಿ ಕೊಲ್ಲುವುದನ್ನು ಕಾಣಬಹುದು. ಅಂದರೆ ಜೀವ ಉಳಿಸಿಕೊಳ್ಳುವ ಪ್ರಯತ್ನದಲ್ಲಿ ಮಾನವ ದೈವ ಎಂದು ನಂಬಿದ್ದನ್ನೇ ಕೊಲ್ಲುವುದನ್ನು ಇಲ್ಲಿ ಚಿತ್ರಿಸಿದ್ದಾರೆ.

'ಪಂಜ್ರೊಳ್ಳಿಯ ಪಿಶಾಚಿಯ ಸವಾಲು' ಕತೆಯಲ್ಲೂ ಕೂಡ ನಾವು ಧರ್ಮದ ಒಂದು ಪರಿಕಲ್ಪನೆಯನ್ನು ಕಾಣಬಹುದು. ಮನುಷ್ಯ ಒಂದು ಎಲ್ಲೆಯನ್ನು ದಾಟಿ ಹೋಗಬಾರದು ಎಂಬ ಉದ್ದೇಶದಿಂದ ಅವರು ಪಂಜ್ರೊಳ್ಳಿ ದೇವರನ್ನು ಪೂಜಿಸುತ್ತಿದ್ದುದು ಕಂಡು ಬರುತ್ತದೆ. ಮನುಷ್ಯ ಯಾವುದೇ ತಪ್ಪನ್ನು ಮಾಡಬಾರದು. ಕಾರಣ ಒಮ್ಮೆ ಆ ಅಜ್ಜಿಯ ಮೊಮ್ಮಗ ಪರೀಕ್ಷೆಗೆಂದು ರಾತ್ರಿಯೆಲ್ಲಾ ಓದುವಾಗ ನಿದ್ದೆಯನ್ನು ಹೋಗಲಾಡಿಸಲು ಅವನು ಕದ್ದು ಕಾಫಿ ಮಾಡಿಕೊಂಡು ಕಕ್ಕಸಿಗೆ ನೀರು ತೆಗೆದುಕೊಂಡು ಹೋಗುವ ಡಬ್ಬದಲ್ಲಿ ಹಾಕಿಕೊಂಡು ಹೋಗಿ ಕುಡಿಯುತ್ತಾರೆ. ಆಗ ಅಜ್ಜಿ ಮನೆಯ ಆಳಾದ ಉದಿರನನ್ನು ಎಲ್ಲಿ ಡಬ್ಬ ಎಂದು ಕೇಳುವ ಸಂದರ್ಭದಲ್ಲಿ ಅವನು ಪಂಚ್ರೊಳ್ಳಿ ಮೇಲಾಣೆ ನನಗೆ ಗೊತ್ತಿಲ್ಲ ಎನ್ನುತ್ತಾನೆ. ಆದರೆ ಅವರು ದೇವರ ಮೇಲೆ ಇಟ್ಟಿದ್ದ ನಂಬಿಕೆ ಹೇಗಿತ್ತು ಎಂಬುದನ್ನು ಕಾಣಬಹುದು.

ತೇಜಸ್ವಿ ಕಥಾಸಾಹಿತ್ಯದಲ್ಲಿ ಹಕ್ಕಿಗಳ ಬಗ್ಗೆ ನದಿ, ಸಮುದ್ರ, ಸಾಗರಗಳ ಬಗ್ಗೆ ಅಂತರಿಕ್ಷದ ವಿದ್ಯಮಾನಗಳ ಬಗ್ಗೆ ಮನುಷ್ಯ ನಾಗರಿಕತೆಯ ವಿವಿಧ ಘಟ್ಟಗಳ ಬಗ್ಗೆ ಕೂಡ ಅಪಾರವಾಗಿ ಬರೆದಿದ್ದಾರೆ. ಇಲ್ಲೆಲ್ಲಾ ಒಂದು ಬಗೆಯ ಆಧ್ಯಾತ್ಮಿಕ ಹುಡುಕಾಟ ಕಾಣಬಹುದು.

'ಕೃಷ್ಣೇಗೌಡನ ಆನೆ' ಎಂಬ ಕಥೆಯಲ್ಲಿ ಧಾರ್ಮಿಕ ಅಧಿಕಾರಶಾಹಿಯ ಕರಾಳ ಕೈಗಳ ಕೃತ್ಯಗಳನ್ನು ಕಾಣಬಹುದು. ಘಟ್ಟದ ಕೆಳಗಿನ ಗೂಳೂರು ಮಠದ ಆನೆಯನ್ನು

ಕೃಷ್ಣೇಗೌಡ ತಂದು ಸಾಕುತ್ತಾನೆ. ಅಂದರೆ ಆ ಆನೆ ಮೊದಲು ಮಠದ ಧಾರ್ಮಿಕ ಆವರಣದಲ್ಲಿದ್ದುದನ್ನು ಕಾಣಬಹುದು. ನಂತರ ಅದು ಕೃಷ್ಣೇಗೌಡನ ಸಹಾಯದಿಂದ ಬೇರೊಂದು ಸಾಮಾಜಿಕ ವಾತಾವರಣಕ್ಕೆ ಬರುತ್ತದೆ.

ತೇಜಸ್ವಿ ಒಂದು ತುದಿಯಲ್ಲಿ ಆಧ್ಯಾತ್ಮವನ್ನು, ಇನ್ನೊಂದು ತುದಿಯಲ್ಲಿ ವಿಜ್ಞಾನವನ್ನಿಟ್ಟು ಎರಡರ ಮಿತಿಗಳನ್ನು ಅರಿಯುವ ಪ್ರಬುದ್ಧತೆ ಅವರಲ್ಲಿತ್ತು, ನವೋದಯದ ಕವಿಗಳು ಪರಿಸರವನ್ನು ದೈವದ ರೂಪದಲ್ಲಿ ಕಂಡರೆ ತೇಜಸ್ವಿ ಅದೇ ನಿಸರ್ಗವನ್ನು ತೇಜಸ್ವಿ ಮನುಷ್ಯ ಸಾಧ್ಯತೆಯ ಹುಡುಕಾಟದ ಭಾಗವಾಗಿ ಭಾವಿಸಿದ್ದರು.

"ಒಟ್ಟಿನಲ್ಲಿ ತೇಜಸ್ವಿ ಜಗತ್ತಿನಲ್ಲಿ ದೇವರಿಲ್ಲ, ದೇವರಿಲ್ಲದ ಜಗತ್ತಿನ ಮತಧರ್ಮಗಳ ಸೋಂಕಿಲ್ಲದ, ಆಧ್ಯಾತ್ಮಿಕ ಶೋಧ ತೇಜಸ್ವಿ ಬರವಣಿಗೆಯ ಪ್ರಮುಖ ಲಕ್ಷಣ, ತಮ್ಮನ್ನು ಇಡೀ ಬ್ರಹ್ಮಾಂಡದ ಸಂಬಂಧದಲ್ಲಿ ಕಂಡುಕೊಳ್ಳುವ ಪ್ರಯತ್ನವನ್ನು ತೇಜಸ್ವಿ ತಮ್ಮ ಕಥಾ ಸಾಹಿತ್ಯದಲ್ಲಿ ಮಾಡಿದ್ದಾರೆ.

**ಊ) ಪ್ರಕೃತಿ ಮತ್ತು ವಿಜ್ಞಾನ:**

ತೇಜಸ್ವಿ ತಮ್ಮ ಕಥಾಸಾಹಿತ್ಯದಲ್ಲಿ ವಿಜ್ಞಾನ ವಿಚಾರಗಳನ್ನು ಬೆಳಕಿಗೆ ತಂದಿದ್ದಾರೆ. ಆಗಾಗಿ ಅವರಿಗೆ ವಿಜ್ಞಾನದಲ್ಲಿ ಹೆಚ್ಚು ಆಸಕ್ತಿ ಇತ್ತೆಂಬುದು ತಿಳಿದುಬರುತ್ತದೆ. ವಿಜ್ಞಾನದಲ್ಲಿ ಅವರಿಗೆ ಆಸಕ್ತಿ ಉಂಟಾಗಲು ಕಾರಣ ಅವರು. ಪ್ರಕೃತಿಯನ್ನು ಸೂಕ್ಷ್ಮವಾಗಿ ಅವಲೋಕನ ಮಾಡುತ್ತಿದ್ದುದೆಂದು ಹೇಳಬಹುದು. ಇಲ್ಲಿ ತೇಜಸ್ವಿಯವರು ತಮ್ಮ ಸುತ್ತಲಿನ ಪರಿಸರ ಜೀವನವನ್ನು ಸೂಕ್ಷ್ಮವಾಗಿ ಗಮನಿಸುತ್ತಾ ಪ್ರಕೃತಿ-ಮಾನವನನ್ನೇ ತಮ್ಮ ಸಾಹಿತ್ಯದ ವಸ್ತುವಾಗಿ ಮಾಡಿಕೊಂಡು ಸರಳ ವಿಷಯಗಳ ಮೂಲಕ ವಿಜ್ಞಾನದ ವಿಷಯಗಳನ್ನು ಕಟ್ಟಿಕೊಟ್ಟಿದ್ದಾರೆ. ಇವರಿಗೆ ವಿಜ್ಞಾನದಲ್ಲಿ ಆಸಕ್ತಿಯಿದ್ದು, ಇವರಷ್ಟು ಸರಳವಾಗಿ, ನೇರವಾಗಿ ವಿಜ್ಞಾನ ವಿಷಯಗಳನ್ನು ಕನ್ನಡದಲ್ಲಿ ಬರೆದಿರುವವರು ವಿರಳ ಎಂದೇ ಹೇಳಬಹುದು. ವಿಜ್ಞಾನದ ವಿಚಾರಗಳನ್ನು ಸಾಹಿತ್ಯದಲ್ಲಿ ಹೆಚ್ಚಾಗಿ ಬಳಸಿದವರು ತೇಜಸ್ವಿ ಎಂದರೆ ತಪ್ಪಾಗಲಾರದು.

ವಿಜ್ಞಾನದ ಮುಖ್ಯ ವಿಚಾರ ಸತ್ಯವನ್ನು ಹುಡುಕುವುದು. ನಿಸರ್ಗದಂತೆ ವಿಜ್ಞಾನವು ನಿರ್ಭಾವುಕ ಮತ್ತು ನಿಷ್ಪಕ್ಷಪಾತಿ, ನಡೆಯುವ ಪ್ರಕ್ರಯೆಗಳನ್ನು ಅಭ್ಯಸಿಸಿ ಅರ್ಥವನ್ನು ನಿರ್ಮಿಸುವುದು ವಿಜ್ಞಾನದ ಕಾರ್ಯ. ವಿಜ್ಞಾನದ ಅರಿವು ಮತ್ತು ಕಲೆ ನಮ್ಮ ಅಸಮರ್ಪದ ಜಗತ್ತನ್ನು ಅಚ್ಚರಿಯ ತಾಣವನ್ನಾಗಿ ಮಾಡುತ್ತದೆ. ವೈಜ್ಞಾನಿಕ ವಿಶ್ಲೇಷಣೆಯನ್ನು ನೋಡಿದಾಗ

ಈ ಸಮಾಜದ ಎಲ್ಲಾ ಕ್ಷೇತ್ರಗಳ ರಾಜಕೀಯ, ಆರ್ಥಿಕ, ಶೈಕ್ಷಣಿಕ, ಸಾಂಸ್ಕೃತಿಕ ಮತ್ತು ಸಾಹಿತ್ಯದ ಮೇಲೆ ವಿಜ್ಞಾನ ಪ್ರಭಾವ ಬೀರಿದೆ.

"ವಿಜ್ಞಾನವನ್ನು ಕುರುತು ಡಿ.ಆರ್. ನಾಗರಾಜ್– ವಿಜ್ಞಾನವು ಜಾಗತಿಕ ಧರ್ಮ ಮತ್ತು ಜಾಗತಿಕ ಜಾತಿ ಎಂದಿದ್ದಾರೆ. ಕನ್ನಡ ಸಾಹಿತಿಗಳು ಶುದ್ಧ ವೈಜ್ಞಾನಿಕ ಚಿಂತನೆಯ ಬಗ್ಗೆ ಸ್ಪಂದಿಸುವುದು ಕಡಿಮೆಯಾದರೂ, ತಂತ್ರಜ್ಞಾನ ತರುವ ಹಿಂಸಾಪಥದ ಕಥನವನ್ನು ತೀವ್ರವಾಗಿ ಹೇಳಿದ್ದಾರೆ. ತೇಜಸ್ವಿ ತಮ್ಮ ಸಾಹಿತ್ಯದಲ್ಲಿ ಅಪ್ರಜ್ಞಾಪೂರ್ವಕವಾಗಿ ವಿಜ್ಞಾನವನ್ನು ಬಳಸಿ ಒಂದು ರೀತಿಯ ಧಾರ್ಮಿಕ ಭಾವನೆಯಿಂದ ಆರಾಧಿಸಿದ್ದಾರೆ".[೩]

ವೈಜ್ಞಾನಿಕ ಚಿಂತನೆಯ ದೃಷ್ಟಿಯಿಂದ ತೇಜಸ್ವಿಯವರನ್ನು ಗಮನಿಸಿದಾಗ ಅವರು ಎರಡು ಸಿದ್ಧಾಂತಗಳಿಂದ ಪ್ರಭಾವಿತರಾಗಿರುವುದು ಕಂಡುಬರುತ್ತದೆ. ಒಂದು ಡಾರ್ವಿನ್ನನ ವಿಕಾಸವಾದ, ಎರಡನೆಯದು ಐನ್‌ಸ್ಟೀನ್, ಮ್ಯಾಕ್ಸ್‌ಪ್ಲಾಂಕ್ ಇತರ ಭೌತವಿಜ್ಞಾನಿಗಳ ಪ್ರಣೀತ ಕ್ವಾಂಟಂ ಮೆಕಾನಿಕ್ಸ್. ವಿಕಾಸವಾದವು ಆ ಸಮಯದಲ್ಲಿ ಒಂದು ಸಂಚಲನವನ್ನೇ ಉಂಟು ಮಾಡಿತ್ತು.

ತೇಜಸ್ವಿಯವರಿಗೆ ತಮ್ಮ ಸಾಹಿತ್ಯ ಕೃತಿಗಳ ಸೃಷ್ಟಿಯಲ್ಲಿ ವಿಜ್ಞಾನದ ಗ್ರಹಿಕೆಯೇ ತಾತ್ವಿಕ ಗ್ರಹಿಕೆ. ಪರಿಸರದ ಅವರ ತಿಳುವಳಿಕೆ, ವೈಜ್ಞಾನಿಕತೆ ಅವರು ಪ್ರಕೃತಿಯನ್ನು ಅರ್ಥ ಮಾಡಿಕೊಳ್ಳುವ ಪ್ರಯತ್ನ ಹೇಗೆಂಬುದು ಅವರ ಕೃತಿಗಳಿಂದ ತಿಳಿದುಬರುತ್ತದೆ.

ಕರ್ವಾಲೊ ಕಾದಂಬರಿಯಲ್ಲಿ 'ಜೀವನಸಂಗ್ರಾಮ' ಮತ್ತು 'ವಂಶನಾಶ' ಪ್ರಕ್ರಿಯೆಯಲ್ಲಿ ಅನಿವಾರ್ಯವಾಗಿ ಜರುಗುವ ಘಟನೆ. ಬದಲಾಗುವ ಸಮಯದಲ್ಲಿ ಬದಲಾಗುತ್ತಿರುವ ಪರಿಸರಕ್ಕೆ ಜೀವಿಗಳು ಹೊಂದಿಕೊಳ್ಳುವುದು ಅಗತ್ಯ. ಹಾಗೇ ಹೊಂದಾಣಿಕೆ ಸಾಧ್ಯವಾಗದಿದ್ದಲ್ಲಿ ಅವು ಕ್ರಮೇಣ ನಿರ್ನಾಮವಾಗುತ್ತವೆ. ವಿಕಾಸ ನಿಧಾನದ ಕ್ರಿಯೆ ಅದು ಹಂತಹಂತವಾಗಿ ಸಾಗಬೇಕು. ಒಂದು ಜೀವಿ ಮತ್ತೊಂದು ಜೀವಿಯಾಗಿ ವಿಕಾಸಗೊಳ್ಳಲು ಕೆಲವು ಸಂಕ್ರಮಣ ರೂಪಗಳನ್ನು ಹಾಯ್ದು ಬರಬೇಕು. ಸರೀಸೃಪವು ಹಕ್ಕಿಯಾಗಿ ಮಾರ್ಪಾಡಾಗುವ ಹಂತದಲ್ಲಿ ಹಾರುವ ಓತಿಯು ಸಂಕ್ರಮಣ ರೂಪವನ್ನು ತಾಳಿತ್ತು. ಅದರ ಜೊತೆಯವು ಹಕ್ಕಿಗಳಾಗಿ ವಿಕಾಸ ಹೊಂದಿದರೆ, ರೆಕ್ಕೆ ಗಳಿಸಿಕೊಳ್ಳಲು ವಿಫಲವಾದ ಹಾರುವ ಓತಿ ವಿನಾಶದ ಅಂಚಿನಲ್ಲಿರುವ ಜೀವಿ. ಈ ಸಂಕ್ರಮಣ ರೂಪದ ಅನ್ವೇಷಣೆಗೆ ಹೊರಡುವ ಸಮಾಜದ ವಿವಿಧ ಸ್ತರದ ಜನರು ವಿಕಾಸದ ಹಂತಗಳನ್ನು ಪ್ರತಿನಿಧಿಸುತ್ತಾ ಹೋಗುತ್ತಾರೆ.

ಇಲ್ಲಿ ವಿಕಾಸದ ಹಂತದಲ್ಲಿ ನಿಂತಿರುವ ಅದ್ಭುತ ವಿಜ್ಞಾನಿ ಇಂದರೆ ಮಂದಣ್ಣ. ಕರಿಯ, ಹಾವುಗೊಲ್ಲರ ಎಂಕ್ಟ, ಹಾರುವ ಓತಿಯಂತೆಯೇ ವಂಶನಾಶದ ಅಂಚಿಗೆ ಬಂದವರು. ವಿಕಾಸಕ್ರಯೆಯಲ್ಲಿ ಹಾರುವ ಓತಿಯಂತೆ ರೆಕ್ಕೆ ಮೂಡಿಸಿಕೊಳ್ಳಲಾಗದೆ ಸಂಕ್ರಮಣ ಸ್ಥಿತಿಯಲ್ಲಿರುವವರು. ಆಗಾಗಿ ಜೀವವಿಕಾಸ ಪ್ರಕ್ರಿಯೆಯಲ್ಲಿ ಹಾರುವ ಓತಿಗಿರುವ ಮಹತ್ವದ ಸ್ಥಾನವನ್ನು ತಿಳಿದ ಕರ್ವಾಲೊ ಮಂದಣ್ಣನನ್ನು ಗೌರವಿಸುತ್ತಾರೆ. ಇದರಲ್ಲಿ ಬರುವ ಹಾರುವ ಓತಿ ಆರರ ಮುಂದೆ ಒಂಭತ್ತು ಸೊನ್ನೆಯ (೬೦೦೦೦೦೦೦೦೦) ಕಾಲದ ಪುರಾತನವಾದದ್ದು. ವೈಜ್ಞಾನಿಕವಾಗಿ ಅಪೇಕ್ಷಿಸಲಾಗಿದ್ದರೂ ಸೃಜನಶೀಲ ಕೃತಿಯಲ್ಲಿ ವೈಚಾರಿಕತೆ ಅತ್ಯಗತ್ಯ.

ಸಾವಿರಾರು ವರ್ಷಗಳಿಂದ ಪ್ರಕೃತಿ ಸಮೂಹದ ನಡುವೆ ಬದುಕಿಕೊಂಡು ಬಂದ ಅಸಮಾನ್ಯ ಜೀವಿಯ ಅನ್ವೇಷಕ ಕರ್ವಾಲೊ. ಈ ವಿಜ್ಞಾನಿಯ ಮಹೋದ್ದೇಶ ಹಾರುವ ಓತಿಯನ್ನು ಹುಡುಕುವುದು, ಅದರ ಬಗ್ಗೆ ತಿಳಿಯುವುದಾಗಿದೆ. ಆ ಓತಿಕ್ಯಾತ ಮಾದರಿಯ ಸರೀಸೃಪ ಆಗಾಗ ಸಾಮಾನ್ಯವಾಗಿ ಮಂದಣ್ಣನ ಕಣ್ಣಿಗೆ ಕಾಣಿಸುವಂಥದ್ದು. ಯಾವುದನ್ನು ಕರ್ವಾಲೊ ಗಹನ ಎಂದು ಪರಿಭಾವಿಸುತ್ತಾನೋ, ಮಂದಣ್ಣ ಅದನ್ನು ಸರಳ ಎಂದು ತಿಳಿಯುತ್ತಾನೆ. ವಿಜ್ಞಾನ ಬದುಕಿನ ರಹಸ್ಯಗಳನ್ನು ಗಹನ ಎಂದು ಭಾವಿಸಿದರೆ ಜನಪದ ಅದೇ ಪ್ರಕೃತಿಯನ್ನು ಸರಳವಾಗಿ ಭಾವಿಸಿದಂತಿದೆ. ಜನಪದ ವಿಜ್ಞಾನಿಗಳಾದ ಮಂದಣ್ಣ, ಎಂಕ್ಟ, ಕರಿಯಪ್ಪ, ಇವರೆಲ್ಲ ಪ್ರಕೃತಿಯ ವಿಜ್ಞಾನಿಗಳಾಗಿದ್ದಾರೆ.

"ಕರ್ವಾಲೊ ಕಾದಂಬರಿಯಲ್ಲಿ ವಿಜ್ಞಾನ ಮತ್ತು ಪ್ರಕೃತಿಯ ಎರಡು ತುದಿಗಳ ನಡುವೆ ಕಾದಂಬರಿಯ ಪಾತ್ರಗಳು ಬಂದು ಹೋಗುತ್ತವೆ. ಅವುಗಳ ಬದುಕು ಅಸ್ತಿತ್ವ ಪಡೆದುಕೊಳ್ಳುವುದು ಪ್ರಕೃತಿಯಲ್ಲೇ. ಈ ಪಾತ್ರಗಳಲ್ಲೂ ಎರಡು ವಿರುದ್ಧವಾದ ತುದಿಗಳು ಕಂಡುಬರುತ್ತವೆ. ವಿಜ್ಞಾನ ಕರ್ವಾಲೊ ಒಂದು ತುದಿಯಾದರೆ ಮಂದಣ್ಣ ಮತ್ತೊಂದು ತುದಿ. ಕರ್ವಾಲೊ ಅಸ್ತಿತ್ವದ ಬೇರುಗಳು ವಿಜ್ಞಾನದಲ್ಲಿ ನೆಲೆ ಪಡೆದುಕೊಂಡರೆ, ಮಂದಣ್ಣನ ಅಸ್ತಿತ್ವದ ಬೇರುಗಳು ಇರುವುದು ಪ್ರಕೃತಿಯಲ್ಲಿ. ವಿಜ್ಞಾನ-ಪ್ರಕೃತಿಗಳ ನಡುವಿನ ಕೊಂಡಿಯಾಗಿ, ಜೀವಜಂತುವಾಗಿ, ಜೀವವಿಕಾಸ ಪಥದ ಅವಶೇಷವಾಗಿ ಕರ್ವಾಲೊ, ಮಂದಣ್ಣ ನಡುವಣ ಸಂವಹನ ಕ್ರಿಯೆಯಾಗಿ ಆಸಕ್ತಿಯ ಕೇಂದ್ರವಾಗಿ ಹಾರುವ ಓತಿ ಬರುತ್ತದೆ".[೪]

ಚಿದಂಬರ ರಹಸ್ಯದಲ್ಲಿ ಕ್ವಾಂಟಂ ಮೆಕಾನಿಕ್ಸ್ ಬೆಳಕಿನ ದ್ವಂದ್ವರೂಪತೆಯ ವಾದವನ್ನು ನೋಡಿದಾಗ ನಮಗೆ ಸತ್ಯದರ್ಶನವಾಗಿತ್ತದೆ. ಈ ನಿಟ್ಟಿನಲ್ಲಿ ಕೆಸರೂರಿನ ದುರಂತಕ್ಕೆ ಆಯಾ ಪಾತ್ರದ ದೃಷ್ಟಿಯಿಂದಲೇ ಸತ್ಯಗೋಚರಿಸಲಾರಂಭಿಸುತ್ತದೆ. ಯುವಕನ ದೃಷ್ಟಿಯಲ್ಲಿ

ಇಡೀ ಚಿಕ್ಕಮಗಳೂರಿನ ದುರಂತ ಕಾಫಿಕಲ್ಚರ್‌ನಲ್ಲಿ ಅಡಗಿದ್ದರೆ, ಇತರರ ದೃಷ್ಟಿಯಲ್ಲಿ ಕಾಡನ್ನು ಬತ್ತಲುಗೊಳಿಸಲು ಬ್ಯಾರಿಗಳು, ಕಂಟ್ರಾಕ್ಟರುಗಳು, ವನ್ಯಜೀವಿಗಳನ್ನು ಹಾಳುಮಾಡುವ ಗೋಸಾಯಿಗಳು, ಮೂಢನಂಬಿಕೆಯಲ್ಲಿ ಮುಳುಗಿರುವ ಜನರು, ಜಾತೀಯತೆ, ಮತೀಯವಾದ ಹೀಗೆ ಭಿನ್ನ ವಿಚಾರಗಳು ಹಾಗೂ ದೃಷ್ಟಿಗಳು ಕೆಸರೂರಿನ ಅವನತಿಗೆ ಕಾರಣಗಳು ಎಂದು ಹೇಳಬಹುದು. ಹಾಗೇಯೇ ವೈಜ್ಞಾನಿಕವಾಗಿ ಏಲಕ್ಕಿ ಸಂಶೋಧನೆಗೆ ಬಂದ ಜೋಗಿಹಾಳರ ಸಾವಿನ ಹಿನ್ನೆಲೆ ವಿವಿಧ ಜನರ ಗ್ರಹಿಕೆಗೆ ತಕ್ಕಂತೆ ರೂಪ ಪಡೆಯುತ್ತಾ ಸಾಗಿ ಅವನತಿಯ ಕಾರಣಗಳೇ ಎಂಬಂತೆ ಕೆಸೂರು ಅವನತಿ ಹೊಂದುತ್ತದೆ.

ಕುಬಿ ಮತ್ತು ಇಯಾಲ ಕತೆಯಲ್ಲಿ ಜನ ಒಂದು ಮೌಢ್ಯಕ್ಕೆ ಸಿಲುಕಿರುತ್ತಾರೆ. ಆದರೆ ಆ ಊರಿಗೆ ವರ್ಗವಾಗಿ ಬಂದ ಕುಬಿ ಎಂಬ ಡಾಕ್ಟರ್‌ನ ವೈದ್ಯಕೀಯ ಜ್ಞಾನ ಕಾಣಬಹುದು. ವೈದ್ಯಕೀಯ ಜ್ಞಾನದ ಮೂಲಕ ಮೌಢ್ಯಗಳನ್ನು ತೊಲಗಿಸುವ ಪ್ರಯತ್ನವನ್ನು ಕುಬಿ ಮತ್ತು ಇಯಾಲದಲ್ಲಿ ಕಾಣಬಹುದು.

ಪರಿಸರದ ಜತೆಯಲ್ಲಿ ನಾವು ವೈಜ್ಞಾನಿಕತೆಯನ್ನು ಕಾಣಬಹುದು. ಮಾನೀಟರ್ ಅಥವಾ ಊಡುವನ್ನು ಲೇಖಕ ತಮ್ಮ ಮನೆಗೆ ತಂದು ಮರಕ್ಕೆ ಕಟ್ಟಿಹಾಕಿರುತ್ತಾರೆ. ಅದು ಎಷ್ಟು ಶಕ್ತಿಶಾಲಿಯಾಗಿತ್ತೆಂದರೆ ಅದನ್ನು ಮರಕ್ಕೆ ಹಗ್ಗದಿಂದ ಕಟ್ಟಿ ಹಾಕಿದ್ದು, ಅದು ಹಗ್ಗದ ಸಮೇತ ಮರದ ಮೇಲೆ ಹೋಗಿ ಕೂತಿತ್ತು. ಹಗ್ಗ ಹಿಡಿದು ಎಳೆದರೂ ಅದು ಜಗ್ಗುವುದಿಲ್ಲ. ಆ ಹಗ್ಗಕ್ಕೆ ಐದು-ಆರು ಜನ ಜೋತು ಬಿದ್ದರೂ ಅದು ತನ್ನ ಬಿಗಿಯಾದ ಹಿಡಿತವನ್ನು ಕದಲಿಸುವುದಿಲ್ಲ ನಂತರ ಅದು ತಪ್ಪಿಸಿಕೊಂಡು ಹೋದದ್ದು ಯಾರ ಭಯವೂ ಇಲ್ಲದೇ ಅವರ ತೋಟದಲ್ಲೇ ಓಡಾಡಿಕೊಂಡಿದ್ದನ್ನು ಕಾಣಬಹುದು. ಕಿವಿಯೊಡನೆ ಒಂದು ದಿನ ಮಾನೀಟರ್ ಕೆರೆಯ ದಡದಲ್ಲಿ ಓಡಾಡುತ್ತಿರುತ್ತದೆ. ಸಿಂಬಳಕ್ಕೆ ಸಿಕ್ಕಿಕೊಂಡ ದೆವ್ವ ಎಂಬ ಕತೆಯಲ್ಲೂ ಪ್ರತಿಯೊಂದು ಸಂಗತಿಯನ್ನು ವೈಜ್ಞಾನಿಕ ವಿಮರ್ಶೆಗೊಳಿಸುವುದನ್ನು ಕಾಣಬಹುದು. ಸಾಮಾಜಿಕ ಜೀವವಿಜ್ಞಾನ ಎಂಬ ಹೊಸ ಅಧ್ಯಯನದ ಶಿಸ್ತನ್ನು ಪರಿಸರದ ಕತೆ ಮೂಲಕ ಹುಟ್ಟುಹಾಕಿದವರು ತೇಜಸ್ವಿ. ಕಳೆದ ಶತಮಾನದಲ್ಲಿ ಕುವೆಂಪು ಅವರು ಬರೆದ 'ಮಲೆನಾಡಿನ ಚಿತ್ರಗಳು' ಕೃತಿಗೆ ಎಂಭತ್ತರ ದಶಕದ ಉತ್ತರವೆಂಬಂತೆ 'ಪರಿಸರದ ಕತೆ' ಮೂಡಿಬಂದಿದೆ. ಇಲ್ಲಿ ಮಲೆನಾಡಿನ ಚಿತ್ರಗಳಿಗಿಂತ ಪರಿಸರದ ಕತೆ ಭಿನ್ನವಾಗಿದೆ. ಹೇಗೆಂದರೆ ಪ್ರತಿಯೊಂದು ಸಂಗತಿಯನ್ನು ವೈಜ್ಞಾನಿಕವಾಗಿ ವಿಮರ್ಶೆಗೊಳಿಸುವುದನ್ನು ಕಾಣಬಹುದು. ಆಗಾಗಿ ಪರಿಸರದ ಕತೆ ಹೊಸ ಆಯಾಮವನ್ನು ಪಡೆದುಕೊಳ್ಳುತ್ತದೆ.

ತೇಜಸ್ವಿ ಅವರಿಗೆ ವಿಜ್ಞಾನದ ಬಗ್ಗೆ ಇರುವ ತೀವ್ರ ಕಾಳಜಿ ಮತ್ತು ಶ್ರದ್ಧೆ ಕನ್ನಡ ಸಾಹಿತ್ಯದ ಸಂದರ್ಭದಲ್ಲಿಯೇ ಹೊಸ ಬಗೆಯದು. ತೇಜಸ್ವಿ ಅವರು ದುರಂತವನ್ನು ನಿಸರ್ಗದ ನಿರ್ಲಿಪ್ತ ಭಾವದಂತೆ ನಿರ್ದಾಕ್ಷಿಣ್ಯವಾಗಿ ಚಿತ್ರಿಸುತ್ತಾರೆ. ಪಾತ್ರಗಳ ಬಗೆಗೆ, ಸನ್ನಿವೇಶಗಳ ಬಗೆಗೆ ತರ್ಕವನ್ನೇ ಹುಡುಕುವ ತೇಜಸ್ವಿ ಕುರಿತು ಡಿ.ಆರ್. ನಾಗರಾಜ್ ಹೇಳುವಂತೆ ವಿಜ್ಞಾನದ ಬಗೆಗೆ ಆರಾಧಕ ಧೋರಣೆ ಸ್ವಾರಸ್ಯಕರವಾದದ್ದು, ವೈಜ್ಞಾನಿಕ ಚಿಂತನೆಯ ಎಲ್ಲ ಮುಖಗಳನ್ನು ಕೃತಿಯ ಆವರಣದಲ್ಲಿ ಒರೆಗೆ ಹಚ್ಚುವ ಹಾಗೂ ಅದನ್ನು ವೈಚಾರಿಕ ಮಟ್ಟಕ್ಕೆ ಏರಿಸಿರುವವರು ತೇಜಸ್ವಿ ಎಂದಿದ್ದಾರೆ.

ವ್ಯಕ್ತಿ ವಿಶಿಷ್ಟ ಸಿದ್ಧಾಂತದಲ್ಲಿ ಅವರ ವಿಚಾರಧಾರೆ, ಕಾಳಜಿಗಳು ಮೂರ್ತಗೊಳ್ಳುತ್ತಿದ್ದ ಕಾಲದಲ್ಲಿ ಅವರ ಮನದಲ್ಲಿ ನಡೆದ ಹೋರಾಟ, ವ್ಯಕ್ತಿ ಸ್ವಾತಂತ್ರ್ಯ, ವೈಜ್ಞಾನಿಕ ಚಿಂತನೆಗಳ ಬೀಜಗಳ ಮೊಳೆಯುವಿಕೆಯನ್ನು ಇದರಲ್ಲಿ ಕಾಣಬಹುದು. ಇಲ್ಲಿ ಭಗವಂತನ ಇರುವಿಕೆ ಸತ್ಯ ಅಥವಾ ಅಸತ್ಯ, ಜನ್ಮಾಂತರಗಳು ವೈಜ್ಞಾನಿಕವಾಗಿ ಸಂಭವನೀಯವಿರಬಹುದು ಅಥವಾ ಇಲ್ಲದಿರಬಹುದು ಎಂದಿದ್ದಾರೆ. ತೇಜಸ್ವಿ ಇಲ್ಲಿ ಹುಟ್ಟು–ಸಾವುಗಳ ಸಮಗ್ರ ಮಾಹಿತಿ ನೀಡುತ್ತಾರೆ. ಇಲ್ಲಿ ವೈದ್ಯಕೀಯ ಜ್ಞಾನ ಮತ್ತು ಮೂಢನಂಬಿಕೆಯನ್ನು ಒಟ್ಟಿಗೆ ನೀಡಿದ್ದಾರೆ. ಸಾವು ಹತ್ತಿರವಾದಾಗ ವೈದ್ಯನ ಬಗ್ಗೆ, ಪುರೋಹಿತನ ಬಗ್ಗೆ ಉಂಟಾಗುವ ಪ್ರತಿಕ್ರಿಯೆ ಜೀವನದಾದ್ಯಂತದ ತಿಳುವಳಿಕೆಯ ಕ್ಷೇತ್ರವನ್ನು ಅನುಭವವನ್ನು ತಿಳಿಸಿದ್ದಾರೆ. ಹೀಗೆ ವ್ಯಕ್ತಿ ವಿಶಿಷ್ಟ ಸಿದ್ಧಾಂತದಲ್ಲಿ ಸಂಸ್ಕೃತಿ, ವಿವಾಹ, ಪ್ರೇಮ, ಕಾಮ ಮತ್ತು ಸೌಂದರ್ಯವನ್ನು ಹಲವಾರು ಉದಾಹರಣೆಗಳ ಮೂಲಕ ವಿವರಿಸಿದ್ದಾರೆ.

'ಕನ್ನಡ ನಾಡಿನ ಹಕ್ಕಿಗಳು' ತೇಜಸ್ವಿಯವರು ಪಕ್ಷಿಸಂಕುಲದ ವೈವಿಧ್ಯತೆ ಮತ್ತು ಪ್ರಾಣಿಗಳನ್ನು ಕುರಿತ ಬೇಟೆಯ ವಿವರಗಳ ಸಂದರ್ಭಗಳಲೆಲ್ಲ ಮನುಷ್ಯನ ಅಜ್ಞಾನ, ಅವುಗಳ ಬದುಕಿನ ವಿಜ್ಞಾನವನ್ನು ಅರಿಯಲು ಕ್ರೌರ್ಯದ ಅನೇಕ ಸಂಗತಿಗಳನ್ನು ಪ್ರಸ್ತಾಪಿಸಿತ್ತಾರೆ. ಸ್ವಾತಂತ್ರ್ಯಾನಂತರ ಭಾರತದ ವ್ಯವಸಾಯದ ಹಿನ್ನೆಲೆಯಲ್ಲಿ ಅರಣ್ಯ ಸಮೃದ್ಧಿಯನ್ನು ಮರೆತ ಭಾರತ ಸರ್ಕಾರ ಬೃಹತ್ ಕೈಗಾರಿಕೆಗಳತ್ತ ಗಮನ ಹರಿಸಿತಿ. ಇದರಿಂದಾಗಿ ಭಾರತದ ವ್ಯವಸಾಯ, ಅರಣ್ಯ ಇವು ನಾಶದ ಅಂಚನ್ನು ತಲುಪಿವೆ. ಅರಣ್ಯದ ನಡುವೆ ಶತಶತಮಾನಗಳಿಂದ ಅದರ ಸಕಲ ವಿಜ್ಞಾನವನ್ನು ಅರಿತು ಪ್ರಕೃತಿಯ ಮಕ್ಕಳಂತೆ ಬದುಕಿ ಬಂದಿದ್ದ ಆದಿವಾಸಿಗಳು ಬೀದಿಪಾಲಾದರು. ಅರಣ್ಯವಾಸ ಬಿಡಲಾರದೆ, ಗ್ರಾಮನಗರ ಬದುಕಿಗೆ ಹೊಂದಿಕೊಳ್ಳಲಾಗದೆ ಆದಿವಾಸಿಗಳ ಬದುಕು ಪೂರ್ಣ ಅತಂತ್ರವಾಯಿತು. ಈಗಲೂ ಅದು ಹಾಗೇ ಮುಂದುವರಿಯುತ್ತಲೇ ಇದೆ.

ಬಿಳಿಗಿರಿರಂಗನ ಬೆಟ್ಟದ ಆದಿವಾಸಿಗಳನ್ನು ಕಾಡಿನಿಂದ ಹೊರತಂದು ಸರ್ಕಾರ ಅವರಿಗೆ ಇಟ್ಟಿಗೆ, ಮಂಗಳೂರು ಹೆಂಚು ಹಾಕಿ ವಾಸಿಸಲು ಮನೆಕಟ್ಟಿಸಿ, ವಾಸಮಾಡಲು ಹೇಳಿದಾಗ ಸೋಲಿಗರ ಹಿರಿಯನೊಬ್ಬ ನೀವು ಕಟ್ಟಿಸಿರುವ ಮನೆಯಲ್ಲಿ ಮಲಗಿದರೆ ಅದು ತಮ್ಮ ಮೇಲೆ ಬಿದ್ದಿಬಿಡುವುದೋ ಎಂಬ ಭಯವಾಗುತ್ತದೆ ಎಂದು ಹೇಳಿದ್ದು ಹೆಚ್ಚು ಅರ್ಥಪೂರ್ಣವಾಗಿದೆ. ಆಧುನಿಕವಾದುದು, ವೈಜ್ಞಾನಿಕವಾದುದ್ದು ಹೆಚ್ಚು ಅನುಕೂಲಕರ ವಾಗಿರುವಂತೆ, ಅಪಾಯಕಾರಿಯಾದುದು ಕೂಡ, ಎಂಬುದನ್ನು ಎಲ್ಲರೂ ಅರಿಯಬೇಕಾದುದನ್ನು ಸೋಲಿಗ ಸಮೂಹ ಅರಿಯದೆಯೇ ಹೇಳಿರಿತ್ತದೆಯೇ ಅಥವಾ ಅವರ ಸರಳ ಬದುಕಿನಲ್ಲಿ ಒಂದು ವೈಜ್ಞಾನಿಕ ಸತ್ಯವೂ ಸಹ ಅಡಗಿದೆ. ವಿಜ್ಞಾನದಂತಹ ಕ್ಲಿಷ್ಟ ವಿಚಾರಗಳು ತೇಜಸ್ವಿ ಅವರ ಬರವಣಿಗೆಯಲ್ಲಿ ಅತ್ಯಂತ ಸರಳವಾಗಿಬಿಟ್ಟಿರುವುದು ಎಲ್ಲರೂ ಅರ್ಥೈಸಿಕೊಳ್ಳುವಂತಿರುವುದು ಮತ್ತೊಂದು ವೈಶಿಷ್ಟ್ಯ.

**ಋ) ಪ್ರಕೃತಿ ಮತ್ತು ರಾಜನೀತಿ :**

ತೇಜಸ್ವಿಯವರ ಕಥಾ ಸಾಹಿತ್ಯದಲ್ಲಿ ನಾವು ಪ್ರಕೃತಿ ಮತ್ತು ರಾಜಕೀಯ ಹೇಗೆ ಮೂಡಿಬಂದಿವೆ ಎಂಬುದನ್ನು ಕಾಣಬಹುದು. ಶ್ರೇಷ್ಠ ಸಾಮಾಜಿಕ ಚಿಕಿತ್ಸಕರಾದ ತೇಜಸ್ವಿ ಸಮಾಜದ ಹತ್ತು ಹಲವು ರೋಗಗಳನ್ನು ತಮ್ಮ ಕಥಾ ಸಾಹಿತ್ಯದಲ್ಲಿ ಸಮರ್ಪಕವಾಗಿ ಗುರುತಿಸುತ್ತಾರೆ. ತಮ್ಮ ಕೃತಿಗಳಲ್ಲಿ ಮಲೆನಾಡಿನ ಜನರ ಬದುಕಿನ ಆರ್ಥಿಕ ಅಸಮಾನತೆಗಿಂತ ರಾಜಕೀಯ ಅಸಮಾನತೆಯ ಚಿತ್ರಣವನ್ನು ನೀಡುತ್ತಾರೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ಜಯಂತಿಯ ತಂದೆಯಾದ ಕೃಷ್ಣಪ್ಪಗೌಡ ರಾಜಕೀಯದಲ್ಲಿ ಹೆಚ್ಚು ಆಸಕ್ತಿ ಹೊಂದಿದವನಾಗಿರುತ್ತಾನೆ. ಇವನ ಮನೆಯ ಮೇಲೆ ಕಲ್ಲು ಬೀಳುವುದು, ಧರ್ಮಾಂಧರ ಮತೀಯ ರಾಜಕೀಯ, ಹುಡುಗರ ಕ್ರಾಂತಿಕಾರಕ ಭ್ರಮೆಗಳನ್ನು ಇಲ್ಲಿ ಕಾಣಬಹುದು. ಇಲ್ಲಿನ ಮತೀಯ ರಾಜಕೀಯ ಕೀಳು ಘಟ್ಟವನ್ನು ಮುಟ್ಟುವ ಮೂಲಕ, ಒಂದು ವಿಕೃತವಾದ ಮನೋಧರ್ಮವನ್ನು ಪ್ರದರ್ಶಿಸುತ್ತದೆ. ಯಾರನ್ನೂ ಮಾನವೀಯ ಚೌಕಟ್ಟಿನಲ್ಲಿ ನೋಡಲಾಗದ ಸ್ಥಿತಿ ಮುಟ್ಟಿದ ಈ ರಾಜಕೀಯ, ಗೋಸಾಯಿಗಳಿಗೆ ನಿವೇಶನದ ಜಾಗ ಹಂಚಿಕೊಡುವುದನ್ನು ಕುಡ ವಿರೋಧಿಯ ಶಕ್ತಿ ಕುಗ್ಗಿಸುವ ತಂತ್ರವನ್ನಾಗಿಸುತ್ತದೆ. ಈ ರಾಜಕೀಯ ಮತೀಯ ಜಗಳದ ಕಾರಣವನ್ನು ವಿಶ್ಲೇಷಿಸುತ್ತ ನಡೆದರೆ ವ್ಯಕ್ತಿ ವ್ಯಕ್ತಿಯ ವೈಯಕ್ತಿಕ ಜಗಳದ ಪರಿಣಾಮದಿಂದ ಉದ್ಭವಿಸಿದ್ದು, ಎಂಬ ಸೂಚನೆ ಸಿಗುತ್ತದೆ. ಇಲ್ಲಿ ರಾಜಕೀಯ ಅಧಿಕಾರದ ಆಸೆಗಾಗಿ ಇಡೀ ಊರಿಗೆ ಊರೇ ಅವನತಿ ಹೊಂದುವುದನ್ನು ಕಾಣಬಹುದು.

ನವವಸಾಹತುಶಾಹಿ ಸಂದರ್ಭದಲ್ಲಿ ದೇಶದ ರಾಜಕಾರಣ ಹುಟ್ಟುಹಾಕಿದ ಗೊಂದಲಗಳನ್ನು ಅಂಥ ಗೊಂದಲಗಳಿಂದ ನಿರ್ಮಾಣವಾದ ರಾಜಕೀಯ ಧಾರ್ಮಿಕ ಹಾಗೂ ಅಂತರರಾಷ್ಟ್ರೀಯ ಸಮಸ್ಯೆಗಳನ್ನು ತೇಜಸ್ವಿಯವರ ಚಿದಂಬರ ರಹಸ್ಯದಲ್ಲಿ ಕಾಣಬಹುದು. ಇಲ್ಲಿ ಹುಸಿ ಕ್ರಾಂತಿಯ ಬೀಜಗಳು ಸಾಮಾಜಿಕ ಬದಲಾವಣೆಯ ಸಂದರ್ಭದಲ್ಲಿ ಭ್ರಷ್ಟವಾಗುವುದನ್ನು ಅವಕಾಶವಾದಿ ರಾಜಕಾರಣದ ನೆಲೆಯಲ್ಲಿ ಅವಸಾನವಾಗುವುದನ್ನು ತೇಜಸ್ವಿ ಚಿದಂಬರ ರಹಸ್ಯ ಕಾದಂಬರಿಯಲ್ಲಿ ಚಿತ್ರಿಸಿದ್ದಾರೆ.

ಜುಗಾರಿಕ್ರಾಸ್ ತನ್ನ ಹೆಸರನ್ನು ಅನ್ವರ್ಥಗೊಳಿಸುವ ಒಂದು ಸ್ಥಳದ ಹೆಸರು ಇದು ಸಮೀಪದ ಹಳ್ಳಿಗಳು ಮೇದರಹಳ್ಳಿ ಮತ್ತು ಅದಕ್ಕೆ ಅಂಟಿಕೊಂಡಿರುವ ದೇವಪುರ, ಇಲ್ಲಿ ಬಿದುರಿನ ಬುಟ್ಟಿಗಳನ್ನು ಎಣಿಯುವ ಗುಡಿಕೈಗಾರಿಕೆಯನ್ನು ನಂಬಿದ್ದವರು ಅಲ್ಲಿ ಬಿದಿರು ತೆನೆ ಹೊಡೆದು ಹೂ ಬಿಡಲು ಪ್ರಾರಂಭವಾಗಿ ಕಾಲಕ್ರಮೇಣ ಆ ಊರು, ಅಲ್ಲಿನ ಗುಡಿ ಕೈಗಾರಿಕೆ ನಶಿಸುವುದನ್ನು ಕಾಣಬಹುದು. ಕಾಫಿ, ಏಲಕ್ಕಿ ತೋಟಗಳ ಮೂಲಕ ಆಧುನಿಕತೆ ಮಲೆನಾಡನ್ನು ಪ್ರವೇಶ ಮಾಡಿದೆ. ಬಹುಹಿಂದಿನಿಂದ ಬಂದಿರುವ ಕಾಳದಂಧೆ ಇನ್ನಷ್ಟು ಹೆಚ್ಚಾಗಿದೆ. ಅಲ್ಲಿನ ವ್ಯವಸ್ಥೆಯ ಅಸಹಾಯಕತೆಯನ್ನು ಹೇಳುತ್ತಲೆ, ಹೇಗೆ ನಮ್ಮ ರಾಜಕೀಯ ನರರಾಕ್ಷಸರಿಗೆ ಅಂದರೆ ಮನುಷ್ಯರಿಗೆ ಕಾಡು ನೆರವು ನೀಡುತ್ತವೆ ಮತ್ತು ಅಮಾಯಕರು ಹೇಗೆ ಈ ಸುಳಿಯಲ್ಲಿ ಬಲಿಯಾಗುತ್ತಾರೆ ಎಂಬುದಕ್ಕೆ ಈ ಕಾದಂಬರಿಯಲ್ಲಿ ಗೌರಿ–ಸುರೇಶರು ನಮಗೆ ಸಾಕ್ಷಿಯಾಗಿ ನಿಲ್ಲುತ್ತಾರೆ.

ಮೇಲಿನ ಎರಡು ಕಾದಂಬರಿಯಲ್ಲೂ ತೇಜಸ್ವಿ ವಾಸ್ತವಿಕ ಘಟನೆಗಳನ್ನು ಹೇಳುತ್ತಾರೆ. ಕೆಸರೂರು ಮತ್ತು ಜುಗಾರಿಕ್ರಾಸ್ ಅತ್ಯಂತ ಶ್ರೀಮಂತ ಪರಿಸರವನ್ನು ಹೊಂದಿದ್ದ ತಾಣಗಳಾಗಿದ್ದವು. ಇಡೀ ಪ್ರಪಂಚದಲ್ಲಿಯೇ ಹೆಸರಾಂತ ಪರಿಮಳಯುತ್ತ ಏಲಕ್ಕಿ ಬೆಳೆಯುವ, ಗಂಧ, ತೇಗ ಮೊದಲಾದ ಆರ್ಥಿಕ ಸಂಪನ್ಮೂಲಗಳ ಹುಟ್ಟು ನೆಲೆಗಳು, ಇಂಥ ಪರಿಸರಕ್ಕೆ ಮನುಷ್ಯನ ಸ್ವಾರ್ಥ ರಾಜಕಾರಣ ದಿನೇ ದಿನೇ ಮಾರಕವಾಗುವ ಬಗೆಯನ್ನು ಇಲ್ಲಿ ಕಾಣಬಹುದು.

'ಕುಬಿ ಮತ್ತು ಇಯಾಲ' ಕತೆಯಲ್ಲಿ ಇಯಾಲಳ ಸಾವಿಗೆ ಇಡೀ ಸಮಾಜವೇ ಕಾರಣ, ಕಥೆಯಲ್ಲಿ ಬರುವ ಅನಿವಾರ್ಯ ಪಾತ್ರಗಳಾದ ಕರ್ತವ್ಯ ಭ್ರಷ್ಟತೆ, ಪುಡಾರಿ ರಾಜಕಾರಣಿಗಳ ಸ್ವಾರ್ಥ ಕೂಡ ಒಂದು ಮುಗ್ಧ ಮಗುವಿನ ಜೀವವನ್ನು ತೆಗೆದುಕೊಳ್ಳುವುದು ಇಲ್ಲಿನ ರಾಜಕೀಯ ವ್ಯಕ್ತಿಗಳ ಸ್ವಾರ್ಥವನ್ನು ತಿಳಿಸುತ್ತದೆ.

ಅವನತಿ ಕಥೆಯು ಗತಿಶೀಲ ಸಮಾಜದ ಅವಿಭಾಜ್ಯ ಅಂಗವಾಗಿದೆ. ಇಸ್ಲಾಪುರದ ಸುರಾಚಾರಿಯ ಅವನತಿ ಮತ್ತು ಸುಬ್ಬಯ್ಯನ ಹೆಂಡತಿ ಗೌರಿಯ ಅವನತಿ ಎರಡು ಇಲ್ಲಿ ಸೇರಿದೆ. ಇಲ್ಲಿ ಬರುವ ಇಸ್ಲಾಪುರ, ಇತ್ತಾವರ, ಜೋಗತಿ ಪೇಟೆ, ಮಾಲೂರು ಈ ಊರಿನಗಳಲ್ಲಿನ ಜನ ಒಂದು ಬಗೆಯ ವಿಚಿತ್ರವಂತರು. ಆರಕ್ಕೆ ಏರದೆ, ಮೂರಕ್ಕೆ ಇಳಿಯದೆ, ಲಾಭ–ನಷ್ಟವನ್ನರಿಯದೇ ಅಸಲಿನಲ್ಲೇ ಓಡಾಡುವ ಜನ, ಇಲ್ಲಿ ಮುಸಲ್ಮಾನ ಕುಟುಂಬಗಳು, ಮಸೀದಿಗಳು, ಬಡತನ, ಶ್ರೀಮಂತಿಕೆ, ಹಿಂದು ಮುಸ್ಲೀಂ ಗಲಾಟೆ, ಚುನಾವಣೆಯ ಕಾಲದ ಗದ್ದಲಗಳು ಎಲ್ಲವೂ ಈ ಊರುಗಳಲ್ಲಿವೆ. ಸಾಲ ಕೊಡುವವರು, ತೆಗೆದುಕೊಳ್ಳುವವರೂ, ವಸೂಲಿ ಮಾಡುವವರು ಇದ್ದರು. ಇಲ್ಲಿ ಪ್ರಸಕ್ತ ರಾಜಕಾರಣ ಮತ್ತು ಸಾಮಾಜಿಕ ಈ ಹಳ್ಳಿಗಳು ನಿಜಕ್ಕೂ ಸವಾಲಾಗಿದ್ದವು. ಅಂದರೆ ಅಲ್ಲಿ ಜಾತಿ ಸಮಸ್ಯೆಯಾಗಲಿ, ರಾಜಕೀಯವಾಗಲಿ, ಪ್ರವೇಶ ಮಾಡದಿರುವುದನ್ನು ಕಾಣಬಹುದು.

"ಕೃಷ್ಣೇಗೌಡನ ಆನೆ' ಕತೆಯಲ್ಲಿ ಕಾಡಿನಲ್ಲಿ ಕರೆಂಟ್ ವೈರ್‌ಗಳು ಕೆಳಗೆ ಬೀಳಲು ಆನೆ ನುಗ್ಗಿ ಮಾಡಿದಂತಹ ಆವಾಂತರವೇ ಕಾರಣ ಹೇಗೆಂದರೆ ಅದು ಮರದ ಕೊಂಬೆಗಳನ್ನು ಮುರಿದು ಹಾಕಿದಾಗ ಲೈನ್ ಕಾಡಿನಲ್ಲೆಲ್ಲೋ ಕೆಳಕ್ಕೆ ಬಿದ್ದಿದೆ. ಇದಾದ ಮೇಲೆ ಆಗ ಅಲ್ಲಿ ಲೈನ್‌ಮ್ಯಾನ್ ತಿಪ್ಪಣ್ಣನ ಸಾವು ಸಂಭವಿಸುತ್ತದೆ. ಅದಕ್ಕೆಲ್ಲಾ ಆನೆಯೇ ಕಾರಣ ಎಂದು ಹೇಳುವ ಜನರಿರುತ್ತಾರೆ. ಆಗ ಆನೆಗೆ ಜಾತಿವಸ್ತರ ಬೆಂಬಲವಾಗಲೀ, ರಾಜಕಾರಣಿಗಳ ಅಭಯ ಹಸ್ತವಾಗಲಿ ರಕ್ಷಣೆಗೆ ಕಾಣಲಿಲ್ಲ ಎಂಬಲ್ಲಿ ರಾಜನೀತಿಯನ್ನು ತರುವುದನ್ನು ಕಾಣಬಹುದು.



ಹೀಗೆ ತೇಜಸ್ವಿ ಸಾಹಿತ್ಯದಲ್ಲಿ ಪ್ರಕೃತಿ ಸಾರ್ಥಕತೆಯ ವಿಶಿಷ್ಟತೆಯಲ್ಲಿ ಪ್ರಕೃತಿ ಮತ್ತು ರಾಜನೀತಿಯನ್ನು ಕಾಣಬಹುದು.

## ಎ) ಪ್ರಕೃತಿ ಮತ್ತು ಸೌಂದರ್ಯ

ಪ್ರಕೃತಿ ಪಾತ್ರದ ಸಾರ್ಥಕತೆಯಲ್ಲಿ ಪ್ರಕೃತಿ ಮತ್ತು ಸೌಂದರ್ಯವನ್ನು ನೋಡುವುದಾದರೆ. ಇಲ್ಲಿ ಸೌಂದರ್ಯ ಎಂದರೆ ಪ್ರಕೃತಿಯನ್ನು ನೋಡಿದ ರೀತಿಯಲ್ಲೇ ಅದನ್ನು ಕಟ್ಟಿಕೊಡವುದಾಗಿದೆ.

ಪ್ರಾರಂಭದ ಕೆಲವು ಕಥೆಗಳನ್ನು ಬಿಟ್ಟರೆ ತೇಜಸ್ವಿಯವರ ತದನಂತರದ ಬಹುತೇಕ ಬರವಣಿಗೆಗಳು ಪ್ರಕೃತಿ ಮೂಲದ ಬರವಣಿಗೆಗಳೇ ಆಗಿವೆ. ನಿಗೂಢ ಮನುಷ್ಯರು ಮತ್ತು ಸ್ವರೂಪ ಈ ಸೃಜನಶೀಲ ಬರವಣಿಗೆಗಳ ಕಾಲದಿಂದಲೇ ತೇಜಸ್ವಿಯವರು ಪ್ರಕೃತಿಯನ್ನು

ತಮ್ಮ ಬರವಣಿಗೆಗೆ ಭಿತ್ತಿಯಾಗಿ ಬಳಸಿಕೊಂಡಿದ್ದಾರೆ. ಅಷ್ಟರಮಟ್ಟಿಗೆ ಪರಿಸರ ತೇಜಸ್ವಿಯವರನ್ನು ಆವರಿಸಿಕೊಂಡಿರುವುದು ಮೂಲ ಸಂಗತಿ. ಕುವೆಂಪು ಪ್ರಕೃತಿಯನ್ನು ಒಂದು ರೀತಿಯ ಸೌಂದರ್ಯದಂತೆ ಕಂಡರೆ ತೇಜಸ್ವಿ ಇನ್ನೊಂದು ರೀತಿಯ ಸೌಂದರ್ಯವನ್ನು ಕಂಡಿದ್ದಾರೆ. ಕುವೆಂಪು ಮತ್ತು ತೇಜಸ್ವಿಯವರ ಪರಿಸರ ಪ್ರಿಯತೆಗೆ ಕುವೆಂಪು ಅವರು ಮಲೆನಾಡಿನಿಂದ ಬಂದದ್ದು. ತೇಜಸ್ವಿಯವರು ಮೈಸೂರಿನಿಂದ ಮಲೆನಾಡಿಗೆ ಹೋಗಿ ನೆಲೆಸಿದ್ದೇ ಕಾರಣ ಎಂದು ಹೇಳಬಹುದು.

ಕುವೆಂಪು ಬರವಣಿಗೆ ಸಮೃದ್ಧಗೊಳ್ಳುವುದು ಪ್ರಕೃತಿಯ ಜೀವಂತ ವಿವರಗಳಿಂದ ಕುವೆಂಪು ಅವರಿಗೆ ಕಾಜಾಣದ ಸೌಂದರ್ಯ ಮತ್ತು ಧ್ವನಿ ಭಾವನಾತ್ಮಕವಾಗಿ ಮುಖ್ಯವೆನಿಸಿದರೆ, ತೇಜಸ್ವಿಯವರಿಗೆ ಕಾಜಾಣದ ಬದುಕಿನ ವಿವರಗಳು, ಅದರ ಸ್ವರೂಪದ ವಿವರಣೆಗಳಲ್ಲಿ ಹೆಚ್ಚಿನ ಆಸಕ್ತಿ.

ತೇಜಸ್ವಿಯವರ ಪ್ರತಿ ಕಥೆ. ಕಾದಂಬರಿಗಳಲ್ಲಿ ನಾವು ಪ್ರಕೃತಿಯ ಸೌಂದರ್ಯವನ್ನು ಕಾಣಬಹುದು. ಅವರ ಪ್ರತಿಕೃತಿಯಲ್ಲೂ ಪ್ರಕೃತಿ ಸೌಂದರ್ಯವೇ ಕೇಂದ್ರವಾಗಿದೆ. ತೇಜಸ್ವಿ ಕನ್ನಡ ಸಾಹಿತ್ಯದಲ್ಲಿ ವಿಶಿಷ್ಟತೆಯನ್ನು ಪಡೆದಿರುವಂತೆ ಕ್ಯಾಮರಾ ಕಲೆಯಲ್ಲಿಯೂ ವಿಶಿಷ್ಟತೆಯನ್ನು ಗಳಿಸಿಕೊಂಡಿದ್ದಾರೆ. ಪ್ರಕೃತಿಯ ಅನಂತ ಮುಖಗಳನ್ನು ಕಥೆ, ಕಾದಂಬರಿ, ಕಾವ್ಯಗಳನ್ನು ಸೆರೆಹಿಡಿದಿರುವಂತೆ ಕ್ಯಾಮಾರದಲ್ಲೂ ಸೆರೆಹಿಡಿದಿದ್ದಾರೆ. ಕನ್ನಡದ ವಾರಪತ್ರಿಕೆಗಳಾದ ಸುಧಾ, ಲಂಕೇಶ್, ಮಯೂರ, ಪತ್ರಿಕೆಗಳಲ್ಲಿ ಅವರು ಪ್ರಕಟಿಸಿದ ಚಿತ್ರ–ಬರಹಗಳು ಅನನ್ಯವಾಗಿದೆ. ತೇಜಸ್ವಿಯವರ ಛಾಯಾಚಿತ್ರಗಳಲ್ಲಿ ಕವಿಯ ಕಲ್ಪನಾಶಕ್ತಿ, ಕಲಾವಿದನ ಸೂಕ್ಷ್ಮತೆ–ನೈಪುಣ್ಯಗಳು ಒಡಮೂಡಿರುತ್ತವೆ. ಮಲೆನಾಡಿನ ಹಕ್ಕಿಗಳು, ಪ್ರಕೃತಿ ಸೌಂದರ್ಯ ಅವರ ಛಾಯಾಚಿತ್ರಗಳಲ್ಲಿ ಸೆರೆಹಿಡಿಯಲ್ಪಟ್ಟಿದೆ.

ತಮ್ಮ ಕ್ಯಾಮರಾ ಮೂಲಕ ಅಣಬೆ ಗುಡ್ಡ, ಗೌರಿ ಹೂವು, ನೀಲಿ ಸಾಮ್ರಾಟ ಹಕ್ಕಿ, ಗೋಣಿಮರ, ಹಳದಿ, ಹುಬ್ಬಿನ ಬುಲ್‌ಬುಲ್, ಹಾಡುಹಕ್ಕಿ, ಕೆಂಪು ಕಪೋಲದ ಕೋಳಿ, ಕೆಂಗದಿರು ಬಣ್ಣದ ನೀಳ ಕಾಲಿನ ಬಾಬ್ಲರ್ ಹಕ್ಕಿ ಮುಂತಾದವುಗಳನ್ನು ಸೆರೆಹಿಡಿದು ಪ್ರಕಟಿಸಿದ ಛಾಯಾ–ಚಿತ್ರಗಳಾಗಿವೆ. ಪ್ರಕೃತಿಯ ಸೌಂದರ್ಯವನ್ನು ಸೂಕ್ಷ್ಮತೆಯಿಂದ ಗಮನಿಸುವ, ಕ್ಷಣಕ್ಷಣಕ್ಕೂ ಬದಲಾಗುತ್ತಿರುವ ಸನ್ನಿವೇಶಗಳನ್ನು ಛಾಯಾಗ್ರಣದ ಮೂಲಕ ಸೆರೆಹಿಡಿದಿದ್ದಾರೆ.

ತೇಜಸ್ವಿಯವರು ಪ್ರಕೃತಿ ಸೌಂದರ್ಯ, ಪರಿಸರ ವಿನಾಶ ಜಗತ್ತಿನ ನಿಗೂಢತೆ, ಮನುಷ್ಯನ ವೈಫಲ್ಯ, ನಿರಂತರ ಹೋರಾಟ ಮುಂತಾದವುಗಳನ್ನು ತಮ್ಮ ಬರಹಗಳಲ್ಲಿ

ಅಳವಡಿಸಿಕೊಂಡಿದ್ದಾರೆ.ಮಲೆನಾಡಿನ ಮಳೆ, ಗುಡುಗು, ಮೋಡ, ಮಿಂಚಿನ ಆರ್ಭಟ ಇವುಗಳನ್ನು ಅದರದೇ ಆದ ಸೌಂದರ್ಯವನ್ನು ಕಟ್ಟಿಕೊಟ್ಟಿದ್ದಾರೆ.

ಅವನತಿ ಕತೆಯಲ್ಲಿ ಮಳೆಗಾಲದ ಮಳೆಯ ವರ್ಣನೆಯನ್ನು ಸಹಜವಾಗಿ ಚಿತ್ರಿಸಿದ್ದಾರೆ. ಆ ಮಳೆಯಲ್ಲಿ ಹೆಂಗಸರ ಗುಂಪು ನಡೆದು ಹೋಗಬೇಕಾದರೆ ಅವರು ತಲೆಯ ಮೇಲೆ ಕೊಪ್ಪೆ ಹಾಕಿದ್ದಾರೆ. ಅದರ ಮೇಲೆ ಬಿದ್ದ ನೀರಿನ ಶಬ್ಧವನ್ನು ಕೂಡ ಅವರು ಪ್ರಕೃತಿ ಸೌಂದರ್ಯದ ಹಿನ್ನೆಲೆಯಲ್ಲಿ ನೀಡಿದ್ದಾರೆ. ಅವರು ಸೌಂದರ್ಯದ ಹಿನ್ನೆಲೆಯನ್ನು ನೀಡಿದ್ದಾರೆ. ಇದೇ ಕಥೆಯಲ್ಲಿ ಗೌರಿಯ ಸೌಂದರ್ಯವನ್ನು ಪ್ರಕೃತಿಯ ಸೌಂದರ್ಯದೊಂದಿಗೆ ಹೇಳುತ್ತಾರೆ. ಸೌಂದರ್ಯವೇ ಮೈವೆತ್ತಿದ ದೇಹದ ವಿನ್ಯಾಸಗಳಿಂದಾಗಿ ಸೌಂದರ್ಯ ಭಂಧೋಬದ್ದವಾಗಿ ಕಾಣುತ್ತಿದ್ದರೂ, ಅವಳಿಗೆ ಅದರತ್ತ ಗಮನವೇ ಇರಲಿಲ್ಲ. ಅಗಾಧವಾದ ಸೌಂದರ್ಯವಿದ್ದ ಗೌರಿ ಅದನ್ನು ಅರಿಯದೇ ಹಳ್ಳಿಯ ರೈತನ ಹೆಂಡಿತಿಯಾಗಿ ಕಾಲಕಳೆಯುವ ಪ್ರಸಂಗವಿದೆ.

ಕುಬಿ ಮತ್ತು ಇಯಾಲದಲ್ಲಿ ಪ್ರಕೃತಿ ನಿರ್ಮಿತ ಬಂಡೆ ರಸ್ತೆ ಮಧ್ಯೆ ನಿರ್ಮಿತವಾಗಿದ್ದು, ಅದು ತನ್ನಲ್ಲಿ ಅನೇಕ ರಹಸ್ಯಗಳನ್ನು ಒಳಗೊಂಡಿರುತ್ತದೆ. ಆ ಬಂಡೆಯ ಹೆಸರು ಧೂಪದ ಬಂಡೆ ಎಂದು ಆ ಬಂಡೆಯ ಹತ್ತಿರದ ಊರಿನ ಪ್ರಕೃತಿ ಸೌಂದರ್ಯವನ್ನು ಕಾಣಬಹುದು.ಡೇರ್ ಡೆವಿಲ್ ಮುಸ್ತಾಫ ಕತೆಯಲ್ಲಿ ಲೇಖಕರು ಚಂದ್ರನ ಬೆಳಕಿನಲ್ಲಿ ರಾತ್ರಿ ಸಮಯ ಸಮುದ್ರದ ತಡದಲ್ಲಿ ವಿಹಾರಮಾಡುವಾಗ ಅಲ್ಲಿ ಕಂಡ ಪ್ರಕೃತಿ ಸೌಂದರ್ಯವನ್ನು ಕಟ್ಟಿಕೊಟ್ಟಿದ್ದಾರೆ.

ಕಿರಗೂರಿನ ಗಯ್ಯಾಳಿಗಳು, ಕೃಷ್ಣೇಗೌಡನ ಆನೆ ಕತೆಗಳಲ್ಲೂ ಪ್ರಕೃತಿ ಸೌಂದರ್ಯವನ್ನು ಕಾಣಬಹುದು. ಕಿರಗೂರಿನಲ್ಲಿ ಪ್ರಾರಂಭವಾಗುವ ಮಳೆ ಪ್ರಕೃತಿ ವಿಕೋಪದಿಂದ ಶತತವಾಗಿ ಮೂರು–ನಾಲ್ಕು ದಿನ ಸುರಿಯುತ್ತದೆ. ಅದರ ರಭಸಕ್ಕೆ ಬಹುಹಿಂದಿನಿಂದ ಇದ್ದ ಹೆಬ್ಬಲಸಿದ ಮರದ ಬೇರು ಅಲುಗಾಡಿ ಅದು ಉರುಳಿ ಬೀಳುವುದನ್ನು ಕಾಣಬಹುದು. ಅದರ ಭೀಕರತೆಯನ್ನು ಪ್ರಕೃತಿಯ ಸಹಜ ಸೌಂದರ್ಯದ ಹಿನ್ನೆಲೆಯಲ್ಲಿ ಕಟ್ಟಿಕೊಟ್ಟಿದ್ದಾರೆ. ಕೃಷ್ಣೇಗೌಡನ ಆನೆಯಲ್ಲಿ ಮೂಡಿಗೆರೆಯ ಸುತ್ತಮುತ್ತಲಿನ ಸೌಂದರ್ಯವನ್ನು ಕಟ್ಟಿಕೊಟ್ಟಿದ್ದಾರೆ.

ನಿಗೂಢ ಮನುಷ್ಯರು ಎಂಬ ಕಿರು ಕಾದಂಬರಿಯಲ್ಲಿ ಮಳೆನಾಡಿನ ಮಳೆ, ಅರಣ್ಯ, ಉಗ್ರಗಿರಿಯ ಮೇಲೆ ಮೋಡ ಕವಿಯೋದು ಕಗ್ಗತ್ತಲನ್ನು ಕಣ್ಣಿಗೆ ಕಂಡಂತೆ ವರ್ಣಿಸಿದ್ದಾರೆ. ಜಗನ್ನಾಥ ಕಾರಿನಲ್ಲಿ ಹೋಗುವಾಗ ಅಲ್ಲಿ ಬೋರೆಂದು ಗಾಳಿ ಬೀಸುತಿತ್ತು. ಜಲಪಾತ

ಧುಮ ಧುಮ ಧುಮ್ಮಿಕ್ಕುವುದು. ಮಳೆ ಒಂದೊಂದೇ ಹನಿಯಾಗಿ ಬೀಳುತ್ತಿದ್ದುದು. ಈಗ ಜೋರಾಗಿ ಬೀಳಲಾರಂಭಿಸಿದ್ದನ್ನು ವರ್ಣಿಸಿದ್ದಾರೆ. ಅಲ್ಲಿನ ಪ್ರಕೃತಿ ಸೌಂದರ್ಯವನ್ನು ಅವರು ತಮಗೆ ಕಂಡಂತೆ ಕಟ್ಟಿಕೊಟ್ಟಿದ್ದಾರೆ.

ಮಾಯಾ ಲೋಕದಲ್ಲಿ ಮಳೆ, ಪ್ರಳಯ, ಬತ್ತಿಹೋಗವ ಹಳ್ಳ, ಕೊನೆಗೆ ತುಂಬಿ ಹರಿಯುತ್ತ ವಿಸ್ಮಯಕ್ಕೆ ಕಾರಣವಾಗುತ್ತದೆ. ಅಡಕೆ ಮರ, ಗದ್ದೆಯ ಮಣ್ಣು ಅದರ ರಭಸದಲ್ಲಿ ಕೊಚ್ಚಿ ಹೋಗಿ ಹೊಸ ಕಂದರವೊಂದು ಸೃಷ್ಟಿಯಾಗುತ್ತದೆ. ಜತೆಗೆ ಹಳ್ಳವು ಹೊಸನದಿಯಾಗಿ ರೂಪಾಂತರ ಕೂಡ ಪಡೆಯುತ್ತದೆ. ಮನುಷ್ಯರ ಬದುಕಿನ ಚಟುವಟಿಕೆಗಳನ್ನು ನಿರರ್ಥಕತೆಯನ್ನು ತೋರಲು ತೇಜಸ್ವಿ ಇಂತಹ ನಿಸರ್ಗದ ವಿದ್ಯಮಾನಗಳನ್ನು ಉದ್ದೇಶಪೂರ್ವಕವಾಗಿ ತರುತ್ತಾರೆಯೇ? ಹಿಂದೆ ಗುಡ್ಡ ಜರಿಯುವಂತೆ ನಿಗೂಢ ಮನುಷ್ಯರಲ್ಲಿ, ಕಾಡ್ಗಿಚ್ಚು ಚಿದಂಬರ ರಹಸ್ಯದಲ್ಲಿ, ಜುಗಾರಿಕ್ರಾಸ್‌ನಲ್ಲಿ ಬರಗಾಲ ಮತ್ತು ಮಳೆ ಪ್ರವಾಹಗಳು ಇವುಗಳನ್ನು ಕಣ್ಣಿಗೆ ಕಟ್ಟುವಂತೆ ಚಿತ್ರಿಸಿದ್ದಾರೆ.

ತೇಜಸ್ವಿ ಬರಹದ ಜೀವಂತಿಕೆ ಹೊರಬರುವುದು ನಿಸರ್ಗದ ವಿದ್ಯಮಾನಗಳು ಬಂದಾಗ, ಮಾಯಾಲೋಕದಲ್ಲಿ ಬರುವ ಮಲೆನಾಡಿನ ಮಳೆಬರುವ ದೃಶ್ಯದ ವರ್ಣನೆಗಳನ್ನು ಗಮನಿಸಬೇಕು. ಇಲ್ಲೆಲ್ಲ ಕಥನವು ರಮ್ಯಕವಿಯ ಕಾವ್ಯ ಹಾಗೆ ತನ್ಮಯವಾಗಿ ಮೈಮರೆಯುತ್ತದೆ. ಆದರೆ ಈ ತನ್ಮಯಗೆ ಮಾನವ ಸಮಾಜ ಬಂದಾಗ ಕಾಣುವುದಿಲ್ಲ. ಅಲ್ಲೊಂದು ಬಗೆಯ ಬಿರುಸು ಕಾಣುತ್ತದೆ. ನಿಸರ್ಗದ ವಿಷಯದಲ್ಲಿ ಯತಾಸ್ಥಿತಿವಾದಿ ನಿಲುವನ್ನು ಬಳಸುವ ತೇಜಸ್ವಿ ಕಥನ, ಸಮಾಜದ ವಿಷಯವನ್ನು ವಿಮರ್ಶಾತ್ಮಕ ಹಾಗೂ ವೈಚಾರಿಕ ನಿಲುವನ್ನು ಬಳಸುತ್ತಾರೆ.. ಪ್ರಾಣಿ, ಸಸ್ಯ ಇರುವ ಜಗತ್ತನ್ನು ಆಪ್ತತೆಯಿಂದ ನೋಡಿದರೆ, ಮನುಷ್ಯರು ವಾಸಿಸುವ ಸಮಾಜವನ್ನು ಕಟುವಾಗಿ ಗಮನಿಸುತ್ತಾರೆ.

ಜೊತೆಗೆ ಪ್ರಕೃತಿಯ ಹುಳುಗಳು, ಹುಪ್ಪಟೆಗಳು, ಚಿಟ್ಟೆಗಳು, ಪಕ್ಷಿಗಳು ಬಗ್ಗೆ ಅವುಗಳ ಜೀವನದ ರೀತಿ–ನೀತಿಗಳ ಬಗ್ಗೆ ಕಣ್ಣಿಗೆ ಕಟ್ಟುವಂತೆ ವಿವರಿಸಿದ್ದಾರೆ. ಅಲ್ಲಿ ಹಾವು ಮೀನು ಕೊಕ್ಕಾನಕ್ಕಿ ಎಂಬ ದೊಡ್ಡ ಮುಂಗಟ್ಟೆ ಹಕ್ಕಿಯ ಪ್ರಸ್ತಾಪ ಮಾಡಿದ್ದಾರೆ. ಹೆಣ್ಣು ಹಕ್ಕಿ ಮೊಟ್ಟೆ ಇಟ್ಟು ಅದರ ಮೇಲೆ ಕಾವು ಕೊಡಲು ಕೂತಾಗ ಗಂಡು ಹಕ್ಕಿ ಅದರ ಸುತ್ತಲು ಒಂದು ತೆಳುವಾದ ಪೊರೆಯನ್ನು ನೇಯ್ದು ಒಂದು ತೂತನ್ನು ಮಾಡಿ ಅದರ ಮೂಲಕ ಗಂಡು ಹಕ್ಕಿ ಆಹಾರ ಹುಡುಕಲು ಹೋಗಿ ತಂದುಕೊಡುವುದನ್ನು ಬಹಳ ಹತ್ತಿರದಿಂದ ನೋಡಿದ್ದಾರೆ. ಆದರೆ ಆ ಗಂಡು ಹಕ್ಕಿಯನ್ನು ಯಾರಾದರೂ ಕೊಂದರೆ ಆ ಸಮಯದಲ್ಲಿ ಹೆಣ್ಣುಹಕ್ಕಿ ಆಹಾರವಿಲ್ಲದೇ ಪ್ರಾಣ ಬಿಡುವುದನ್ನು ನೋಡಬಹುದು.

ಕರ್ವಾಲೋ ಕಾದಂಬರಿಯಲ್ಲಿ ತೇಜಸ್ವಿ ವಿಜ್ಞಾನದ ಗಾಡಿ ಹತ್ತುವ ಮೂಲಕ ಅಲ್ಲಿನ ಜೀವ ವಿಕಾಸದ ರಹಸ್ಯ ಕೀಲಿಕೈನಂತೆ ತೋರುವ ಹಾರುವ ಹಕ್ಕಿಯನ್ನು ಹುಡುಕಲು ಹೊರಡುತ್ತಾರೆ. ಅಲ್ಲಿನ ಪ್ರಕೃತಿಯನ್ನು ನೋಡಿ ಸುತ್ತೆಲ್ಲಾ ಈಚಲು ಪೊದೆಗಳು ಅಲೆ ಅಲೆಯಾಗಿ ವಿಶಾಲವಾಗಿ ಹಬ್ಬಿದ್ದ ಬಯಲು. ಅಲ್ಲೊಂದು ಇಲ್ಲೊಂದು ಸಣ್ಣ ಗುಡ್ಡಗಳಿದ್ದುರೂ. ಅದರ ಎಲ್ಲಿ ಪಾರ್ಶ್ವಗಳು ಒಂದೊ ರೀತಿಯಾಗಿದ್ದವು. ಎಂದು ಪ್ರಕೃತಿ ಸೌಂದರ್ಯದ ವರ್ಣನೆಯನ್ನು ನೀಡುತ್ತಾರೆ.

### ಏ) ಪ್ರಕೃತಿ ಮತ್ತು ತತ್ವಶಾಸ್ತ್ರ:

ತೇಜಸ್ವಿ ಕಥಾಸಾಹಿತ್ಯದಲ್ಲಿ ಪ್ರಕೃತಿ ಪಾತ್ರದ ಸಾರ್ಥಕತೆಯಲ್ಲಿ ಪ್ರಕೃತಿ ಮತ್ತು ತತ್ವಶಾಸ್ತ್ರವನ್ನು ಗಮನಿಸುವುದಾದರೆ, ಪ್ರಕೃತಿಯ ತತ್ವಕ್ಕೆ ಎಲ್ಲರೂ ಹೊಂದಿಕೊಂಡು ಬದುಕಬೇಕಾದ ಅನಿವಾರ್ಯತೆ ಸೃಷ್ಟಿಯಾಗಿದೆ. ತೇಜಸ್ವಿ ಬಹುತತ್ವವಾದವನ್ನು ಒಪ್ಪಿಕೊಳ್ಳುತ್ತಾರೆ. ಏಕೆಂದರೆ ಜೀವವೈವಿಧ್ಯ, ಸಸ್ಯ, ಪ್ರಾಣಿ, ಸಮಾಜ, ಮಾನವ ಎಲ್ಲರೂ ಸಹ ಬದುಕಿ ಉಳಿಯಬೇಕೆಂಬುದನ್ನು ಹೇಳುತ್ತಾರೆ. ಅದೇ ರೀತಿಯಲ್ಲಿ ತಮ್ಮ ಕಥಾಸಾಹಿತ್ಯದಲ್ಲಿ ಚಿತ್ರಿಸುತ್ತಾರೆ. ಹೋರಾಟ ಎಂಬುದು ಇವರ ಕಥಾಸಾಹಿತ್ಯದ ಮುಖ್ಯ ಭಾಗವಾಗಿದೆ. ಅಂದರೆ ಪ್ರಕೃತಿಯೊಂದಿಗೆ ಪ್ರತಿಯೊಂದು ಹೋರಾಟ ನಡೆಸುತ್ತಾ ಬದುಕುವುದನ್ನು ಕಾಣಬಹುದು.

ತತ್ವಶಾಸ್ತ್ರ ಎಂಬುದು ಸಮಾಜವಾದಿ ತತ್ವ, ರಾಜಕೀಯ, ಅಸ್ತಿತ್ವವಾದ ವಿಕಾಸ, ಕ್ರಾಂತಿಯನ್ನು ಒಳಗೊಂಡಿರುತ್ತದೆ. ತತ್ವಶಾಸ್ತ್ರವು ಹೋರಾಟದ ಸಹಜ ಚಿತ್ರಣವನ್ನು, ನೀಡುತ್ತದೆ. ಇಲ್ಲಿ ಬುದ್ಧಿಶಕ್ತಿ, ತೋಳ್ಬಲ, ಜನಬಲ, ಇರೋದು ಮಾತ್ರ ಬದುಕುಳಿದು ಉಳಿದವು ನಾಶ ಹೊಂದುತ್ತವೆ.

ಕರ್ವಾಲೊ, ಚಿದಂಬರರಹಸ್ಯ, ಕಿರಗೂರಿನ ಗಯ್ಯಾಳಿಗಳು, ನಿಗೂಢ ಮನುಷ್ಯರು, ಸ್ವರೂಪ, ಜುಗಾರಿಕ್ರಾಸ್, ಪರಿಸರದ ಕತೆಗಳು, ಇಲ್ಲೆಲ್ಲಾ ಪಾತ್ರಗಳು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಹೋರಾಡುವುದನ್ನು ಕಾಣಬಹುದು. ಮಲೆನಾಡಿನ ಜನರು ಅಲ್ಲಿನ ಮಳೆ, ಗಾಳಿ, ಮೋಡ, ಸಿಡಿಲು, ಮಿಂಚು, ಗುಡುಗು, ಇವುಗಳಿಗೆ ಸದಾ ಹೆದರಿಕೊಂಡು ಅವುಗಳ ಮಧ್ಯೆ ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳುವ ಪ್ರಯತ್ನವನ್ನು ಕಾಣಬಹುದು.

ನಿಗೂಢ ಮನುಷ್ಯರು ಕಿರುಕಾದಂಬರಿಯಲ್ಲಿ ಜಗನ್ನಾಥ ತನ್ನ ಅಸ್ತಿತ್ವವನ್ನು ಕಂಡುಕೊಳ್ಳಲು ನಗರದಿಂದ ಮಲೆನಾಡಿಗೆ ಬರುವುದನ್ನು ಕಾಣಬಹುದು. ಅಂದರೆ

ಅವನಿಗೆ ಅವನ ಅಸ್ತಿತ್ವವೂ ಮಲೆನಾಡಿನಲ್ಲಿದೆ ಎಂದು ತಿಳಿದ ಅವನು ಮಲೆನಾಡಿನಲ್ಲಿ ಜಮೀನುಕೊಳ್ಳಲು ತನ್ನ ಸ್ನೇಹಿತನಾದ ರಂಗಪ್ಪನ ಜೊತೆ ಬರುತ್ತಾನೆ ಅಲ್ಲಿ ಮಲೆನಾಡಿನ ಪ್ರಕೃತಿಯಲ್ಲಿ ತನ್ನ ಜೀವನದ ಅಸ್ತಿತ್ವ ಕಂಡುಕೊಂಡಿದ್ದ ಜಗನ್ನಾಥನನ್ನು ಭೇಟಿಮಾಡುತ್ತಾರೆ. ಅಲ್ಲಿ ಮಲೆನಾಡಿನ ಭೀಕರತೆಯ ಅರಿವು ಅವರಿಗಾಗಿ ಅವರು ಹೊರಡುವುದನ್ನು ಕಾಣಬಹುದು. ಆಗ ಜಗನ್ನಾಥನನ್ನು ಅವರೂ ತಮ್ಮ ಜೊತೆಯಲ್ಲಿ ಬರುವಂತೆ ಹೇಳಿದಾಗ ತನ್ನ ಬದುಕು, ಅಸ್ತಿತ್ವ ಮಲೆನಾಡು ಎಂದು ತಿಳಿದಿದ್ದ ಜಗನ್ನಾಥ ಅಲ್ಲೇ ಉಳಿದುಕೊಳ್ಳುವುದನ್ನು ಕಾಣಬಹುದು.

ಸ್ವರೂಪ ಕಾದಂಬರಿಯಲ್ಲಿನ ನಾಯಕ ಶ್ರೀನಿವಾಸ ತನ್ನ ಜೀವನದಲ್ಲಿ ನಡೆದ ತನ್ನ ಎಲ್ಲಾ ಘಟನೆಗಳನ್ನು ಗೆಳೆಯನಾದ ಹೇಮಂತನಿಗೆ ವಿವರಿಸುತ್ತಾ ತನ್ನ ಅನುಭವದ ಎಳೆಯಲ್ಲೇ ತನ್ನ ಅಸ್ತಿತ್ವದ ಹುಡುಕಾಟಕ್ಕಾಗಿ ತೊಡಗುವುದನ್ನು ಕಾಣಬಹುದು. ಅಲ್ಲಿ ಶ್ರೀನಿವಾಸ ಬೇಟೆಗೆಂದು ಹೋದಾಗ ಅಲ್ಲಿ ಹಂದಿ ಎಂದು ತಿಳಿದು ಒಬ್ಬ ವ್ಯಕ್ತಿಯನ್ನು ಕೊಲ್ಲುತ್ತಾನೆ. ಆಗ ಶ್ರೀನಿವಾಸ ಕೊಲೆಯಾದವನ ನೋಟದಲ್ಲಿ ತನ್ನ ಸ್ವರೂಪದ ದರ್ಶನವನ್ನು ಕಾಣುತ್ತಾನೆ. "ಸ್ವರೂಪ ನವ್ಯ ಮಾರ್ಗದ ಕಾದಂಬರಿಯಾಗಿದ್ದರೂ ಅದು ಒಳಗೊಂಡಿರುವ ವ್ಯಕ್ತಿಪ್ರಜ್ಞೆಗೆ ಹೆಚ್ಚು ಒತ್ತನ್ನು ಕೊಟ್ಟಿರುವ ಕಾರಣದಿಂದ, ವ್ಯಕ್ತಿ ತನ್ನ ಮನಸ್ಸಿನ ಒಳಲೋಕವನ್ನು ವಿಶ್ಲೇಷಣೆಗೆ ಒಳಪಡಿಸುವ ಕ್ರಮವೇ ನವ್ಯಮಾರ್ಗದ ಬರವಣಿಗೆಯ ನಿರೂಪಣಾ ತಂತ್ರಗಾರಿಕೆ ಇಲ್ಲಿ ಮುಖ್ಯವಾಗಿ ಕಂಡುಬರುತ್ತದೆ. ವ್ಯಕ್ತಿಯ ಕರ್ಮ ಹಾಗೂ ಕ್ರಿಯಾಶೀಲತೆಯ ಬಗ್ಗೆ ಹೊಸ ತಿಳಿವಳಿಕೆಯನ್ನು ನೀಡುವ ಸ್ವರೂಪದಂತಹ ಕಾದಂಬರಿಗಳಿಗೆ ಪಾಶ್ಚಾತ್ಯ ತತ್ವಶಾಸ್ತ್ರವೇ ಪ್ರೇರಣೆಯಾಗಿದೆ. ಮನುಷ್ಯನ ಅಸ್ತಿತ್ವವಾದವನ್ನು ಪ್ರಜ್ಞಾ ಪ್ರವಾಹ ತಂತ್ರದ ಮೂಲಕ ನಿರೂಪಿಸುವ ಲೇಖಕರ ಪ್ರಯತ್ನ ಸ್ವರೂಪದಲ್ಲಿ ಯಶಸ್ವಿಯಾಗಿದೆ".[೫]

ಕರ್ವಾಲೊ ಕಾದಂಬರಿಯಲ್ಲಿ ಜೀವವಿಕಾಸದ ಹಾರುವ ಓತಿಯ ಬಗ್ಗೆ, ಅದರ ಅಸ್ತಿತ್ವದ ಬಗ್ಗೆ ನಿರೂಪಕ, ಕರ್ವಾಲೊ, ಕರಿಯಪ್ಪ, ಎಂಕ್ಟ, ಮಂದಣ್ಣ ಎಲ್ಲರೂ ಅದರ ಅಸ್ತಿತ್ವ ಹುಡುಕಿ ಕಾಡಿಗೆ ಹೊರಡುವುದು. ಅಲ್ಲಿ ಹಾರುವ ಓತಿ ಅವರ ಕಣ್ಣಿಗೆ ಕಾಣಿಸಿಕೊಂಡು ತನ್ನ ಅಸ್ತಿತ್ವದ ಕುರುಹನ್ನು ನೀಡುತ್ತದೆ.

ಚಿದಂಬರ ರಹಸ್ಯ ಕಾದಂಬರಿಯಲ್ಲಿ ನಾವು ತತ್ವಶಾಸ್ತ್ರದ ಪ್ರಭಾವವಿರುವುದನ್ನು ಕಾಣಬಹುದು. ಅಲ್ಲಿಯ ಮಾನವ, ಪ್ರಾಣಿವರ್ಗ ಎಲ್ಲವು ಒಂದು ತತ್ವಕ್ಕೆ ಅಂಟಿಕೊಂಡು ಜೀವನ ನಡೆಸುವುದನ್ನು ಕಾಣಬಹುದು. ಅಲ್ಲಿ ಮಾನವ ಪ್ರಕೃತಿಯೊಂದಿಗೆ ಸಾಮಾಜಿಕ, ರಾಜಕೀಯ, ಆರ್ಥಿಕ, ಧಾರ್ಮಿಕವಾಗಿ ನಿರಂತರ ಹೋರಾಟ ಮಾಡುತ್ತಿರುತ್ತಾನೆ. ಇಲ್ಲಿ

ಕೃಷ್ಣೇಗೌಡ ಮತ್ತು ಊರಿನ ವಿದ್ಯಾವಂತ ಹುಡುಗರ ನಡುವೆ ಘರ್ಷಣೆ ನಡೆಯುತ್ತಿರುತ್ತದೆ. ಇಲ್ಲಿ ಕೃಷ್ಣೇಗೌಡನ ತೋಳಿನ ಬಲವೇ ಹೆಚ್ಚು ಏಕೆಂದರೆ ಅವನು ರಾಜಕೀಯವಾಗಿ ಮತ್ತು ಆರ್ಥಿಕವಾಗಿ ಬಲಿಷ್ಠನಾಗಿರುತ್ತಾನೆ. ಆದರೆ ಅಲ್ಲಿ ಕಾದಂಬರಿಯ ಕೊನೆಯಲ್ಲಿ ಇಡೀ ಊರಿನ ಜೊತೆಗೆ ಅಲ್ಲಿಯ ಜನ ವಿನಾಶವನ್ನು ಹೊಂದುತ್ತಾರೆ. ಅಲ್ಲಿ ತಮ್ಮ ಅಸ್ತಿತ್ವವನ್ನು ರಫಿ ಮತ್ತು ಜಯಂತಿ ಕಂಡುಕೊಳ್ಳುತ್ತಾರೆ. ಅವರುಗಳೇ ಮುಂದಿನ ಪೀಳಿಗೆಯ ಕುರುಹಾಗಿ ತಮ್ಮ ಬುದ್ಧಿ ಸಾಮರ್ಥ್ಯದಿಂದ ಉಳಿದುಕೊಳ್ಳುವುದನ್ನು ಕಾಣಬಹುದು.

ಇಲ್ಲಿನ ಕಾದಂಬರಿಯಲ್ಲಿ ಬರುವ ಯುವಕರು ಅರ್ಥಶಾಸ್ತ್ರದ ಪ್ರಾಧ್ಯಾಪಕ ರಾಮಚಂದ್ರನ ಬೆಂಬಲವನ್ನು ಪಡೆದು ಸಮಾಜದಲ್ಲಿ ಬದಲಾವಣೆಯನ್ನು ತರಲು ಕ್ರಾಂತಿಯಾಗಬೇಕೆಂದು ಹೇಳುವುದನ್ನು ಅವರ ಪ್ರತಿ ಮಾತಿನಲ್ಲೂ ನಾವು ಕಾದಂಬರಿಯಲ್ಲಿ ಗಮನಿಸಬಹುದು. ಕಾರಣ ಆರ್ಥಿಕ ಒತ್ತಡವೋ, ಸಾಮಾಜಿಕ ಕಳಕಳಿಯೋ, ರಾಜಕೀಯ ಮಹತ್ವಕಾಂಕ್ಷಿಯೋ ಎಂಬುದು ಆ ಯುವಕರಿಗೆ ತಿಳಿಯದು.

ಜುಗಾರಿಕ್ರಾಸ್ ಕಾದಂಬರಿಯಲ್ಲಿ ಸುರೇಶ ಮತ್ತು ಗೌರಿ ತಮಗೆ ತಿಳಿಯದಂತೆ ಒಂದು ಕಾಳದಂಧೆಯ ಕಪಿಮುಷ್ಟಿಗೆ ಸಿಲುಕಿ ನೋವನ್ನು ಅನುಭವಿಸುತ್ತಾರೆ. ಕೊನೆಗೆ ಸುರೇಶನ ಸ್ನೇಹಿತ ರಾಜಪ್ಪನಿಂದ ಅವರು ಆ ಸಂಕೋಲೆಯಿಂದ ಬಿಡುಗಡೆ ಹೊಂದುವುದನ್ನು ಕಾಣಬಹುದು. ಇಲ್ಲಿ ಹಣ ಎಂಬುದು ಇಡೀ ಊರನ್ನು ನಿಯಂತ್ರಿಸುತ್ತಿರುತ್ತದೆ. ಇಲ್ಲಿ ನಡೆಯುವ ಎಲ್ಲಾ ಚಟುವಟಿಕೆಗಳಿಗೂ ಒಬ್ಬ ಬಾಸ್ ಇದ್ದಾನೆ. ಆದರೆ ಅವನು ಯಾರು ಎಂಬ ಸುಳಿವು ಕಾದಂಬರಿಯಲ್ಲಿ ಇಲ್ಲ. ಅಂದರೆ ಮನುಷ್ಯರನ್ನು ನಿಯಂತ್ರಿಸುವ ಬೇರೊಂದು ಶಕ್ತಿ ಅಥವಾ ಮನುಷ್ಯನ ಹಿಂದೆ ಕಾಣದ ಕೈ ಕೆಲಸ ಮಾಡುತ್ತಾ ಇಡೀ ಸಮಾಜವನ್ನೇ ತನ್ನ ಹಿಡಿತದಲ್ಲಿಟ್ಟುಕೊಂಡಿರುವುದನ್ನು ಕಾಣಬಹುದು.

ಇಲ್ಲಿ ಸುರೇಶ ಮತ್ತು ಗೌರಿ ೨೪ ಗಂಟೆಯಲ್ಲಿ ನಡೆಯುವ ಕತೆಯಲ್ಲಿ ತಮ್ಮ ಜೀವವನ್ನು ಉಳಿಸಿಕೊಂಡು ಅದರ ಗುಂಗಿನಿಂದ ಹೊರತಬರುತ್ತಾರೆ. ಅದಕ್ಕೆ ಅವರ ಬುದ್ದಿಶಕ್ತಿ ಮತ್ತು ರಾಜಪ್ಪನ ಸಹಾಯವೇ ಕಾರಣ ಎಂದು ಹೇಳಬಹುದು. ಇಲ್ಲಿ ಸುರೇಶ ಮತ್ತು ಗೌರಿ ತಮ್ಮ ಪರಿಸರದಲ್ಲಿ ತಮ್ಮ ಅಸ್ತಿತ್ವವನ್ನು ಉಳಿಸಿಕೊಳ್ಳಲು ಅನೇಕ ಪರಿಪಾಟಲು ಪಡುವುದನ್ನು ಕಾಣಬಹುದು.

ಹೀಗೆ ಪ್ರಕೃತಿ ಸಾರ್ಥಕತೆಯಲ್ಲಿ ಪ್ರಕೃತಿ ಮತ್ತು ತತ್ವಶಾಸ್ತ್ರವನ್ನು ಕಾಣಬಹುದಾಗಿದೆ. ಇವರ ಎಲ್ಲಾ ಕಥಾಸಾಹಿತ್ಯದ ಪಾತ್ರಗಳು ತಮ್ಮ ಅಸ್ತಿತ್ವವನ್ನು ಕಂಡುಕೊಳ್ಳಲು ಹೋರಾಟ ಮಾಡುವುದನ್ನು ಕಾಣಬಹುದಾಗಿದೆ. ಕರ್ವಾಲೊದಲ್ಲಿ ಹಾರುವ ಓತಿ ವಿಕಾಸವಾದದ ಒಂದು ಕುರುಹಾಗಿ ತನ್ನ ಅಸ್ತಿತ್ವವನ್ನು ಕಂಡುಕೊಳ್ಳುವುದನ್ನು ಜುಗಾರಿ ಕ್ರಾಸ್‌ನಲ್ಲಿ ಸುರೇಶ ಮತ್ತು ಗೌರಿ ಬಂದು ತತ್ವದ ಹಿನ್ನೆಲೆಯಲ್ಲಿ ಅಸ್ತಿತ್ವ ಕಂಡುಕೊಳ್ಳುವುದನ್ನು, ಸ್ವರೂಪದಲ್ಲಿ ಶ್ರೀನಿವಾಸ ತನ್ನ ಅಸ್ತಿತ್ವವನ್ನು, ನಿಗೂಢ ಮನುಷ್ಯರಲ್ಲಿನ ಜಗನ್ನಾಥ ತನ್ನ ಅಸ್ತಿತ್ವವನ್ನು, ಒಂದು ತತ್ವದ ಹಿನ್ನೆಲೆಯಲ್ಲಿ ಕಂಡುಕೊಳ್ಳುವುದನ್ನು ನಾವು ಗುರುತಿಸಬಹುದು.

### ಐ) ಪ್ರಕೃತಿ ಮತ್ತು ಸಂಸ್ಕೃತಿ:

ಇಲ್ಲಿ ನಾವು ಪ್ರಕೃತಿ ಪಾತ್ರದ ವೈಶಿಷ್ಟತೆಯಲ್ಲಿ ಪ್ರಕೃತಿ ಮತ್ತು ಸಂಸ್ಕೃತಿಯನ್ನು ನೋಡೋಣ. ಸಂಸ್ಕೃತಿ ಎಂದರೆ ಗ್ರಾಮೀಣ, ನಗರ, ಬುಡಕಟ್ಟು ಇವೆಲ್ಲವುಗಳ ಒಟ್ಟಾರೆ ಜೀವನ, ಆಚಾರ, ವಿಚಾರ, ಉಡುಗೆ, ತೊಡುಗೆಗಳನ್ನು ಸಂಸ್ಕೃತಿ ಎನ್ನಬಹುದು. ಚಿದಂಬರ ರಹಸ್ಯದಲ್ಲಿನ ಕತೆ ಸಾಂಸ್ಕೃತಿಕ ಅಧಃಪತನ ಎಂದಾಗ ಇಲ್ಲಿ ಕೆಸರೂರಿನ ಸಂಸ್ಕೃತಿಯು ಸಾಮಾಜಿಕವಾಗಿ, ರಾಜಕೀಯವಾಗಿ, ಅವನತಿ ಹೊಂದುವುದನ್ನು ಕಾಣಬಹುದು. ಮನುಷ್ಯನ ಧಾರ್ಮಿಕ ಮತಾಂಧತೆ ಹಿಂದೂ–ಮುಸ್ಲೀಂರ ವೈಷಮ್ಯ, ಹಣದ ವ್ಯಾಮೋಹ, ಸಮಷ್ಟಿ ಬದುಕನ್ನೇ ಲಂಟಾನಾ ರಾಕ್ಷಸನ ಬಾಯಿಗೆ ಆಹುತಿ ಮಾಡುವ ದುರಂತವನ್ನು ಕಾಣಬಹುದು.

ಕೆಸರೂರಿನ ಆರ್ಥಿಕ ಅವನತಿಗೆ ಸಾಂಸ್ಕೃತಿಕ ಅದಃಪತನವೇ ಕಾರಣ ಎಂಬುದು ವಿಜ್ಞಾನಿ ಪಾಟೀಲರ ಮಾತಿನಲ್ಲಿ ವ್ಯಕ್ತವಾಗುವುದನ್ನು ಗಮನಿಸಬಹುದು. ಇಡೀ ಏಲಕ್ಕಿಗೆ ಬಂದಿರುವ ರೋಗ ಸುಡುವ ಮೊದಲು ಕೆಸರೂರಿನ ಸಮಾಜಾನ ಸುಡಬೇಕು. ಈ ಸಾಂಸ್ಕೃತಿಕ ಅವನತಿಯ ಕುರೂಪ ಕೆಸರೂರಿನ ಜೀವನದಲ್ಲಿ ಪ್ರತಿಹಂತದಲ್ಲೂ ಕಂಡುಬರುತ್ತದೆ. ಎಲ್ಲವನ್ನು ಜಾತೀಯತೆ, ಮತೀಯತೆಯ ಚೌಕಟ್ಟಿನೊಳಗೆ ನೋಡುವ ಕೆಸೂರಿನ ಸಮಾಜಕ್ಕೆ ತನ್ನ ಅವನತಿಯನ್ನೇ ಯೋಚಿಸುವುದು ಸಾಧ್ಯವಾಗಿಲ್ಲ. ಕೆಸರೂರಿನ ಸಂಸ್ಕೃತಿಯ ಅವಸಾನವನ್ನು ಅದರ ವಿಸ್ತೃತ ರೂಪದಲ್ಲಿ ಅರಿಯಲು ಸಾಧ್ಯವಿಲ್ಲದಿದ್ದರೂ ತನ್ನ ಅನುಭವಕ್ಕೆ ಬಂದ ರೀತಿಯಲ್ಲೇ ಗ್ರಹಿಸಿ ಕೆಸರೂರಿಗೆ ಕೇಡುಗಾಲ ಬಂದಿದೆ ಎಂದು ಸಸ್ಯಗಳ ಬಗ್ಗೆ, ಸಸ್ಯಗಳ ರೋಗಗಳ ಬಗ್ಗೆ ಮುಖ್ಯವಾಗಿ ಏಲಕ್ಕಿಯ ಕೆಸರೂರ ವೈರಸ್ ಕಾಯಿಲೆ ಬಗ್ಗೆ ಮಾಹಿತಿ ಕೊಡಲು ಬಂದಿದ್ದ ಪಾಟೀಲರು ಹತಾಶರಾದರು. ಕೆಸರೂರಿನ

ಕಾಯಿಲೆಗೆ ಇಡೀ ಒಂದು ಸಮಾಜವೇ ಸಿಕ್ಕಿದ್ದನ್ನು ಪಾಟೀಲರು ಕಾಣುತ್ತಾರೆ. ಅಲ್ಲಿ ಕೆಸರೂರಿನ ಸಂಸ್ಕೃತಿ ಇಡೀ ಏಲಕ್ಕಿಯೊಂದಿಗೆ ನಾಶ ಹೊಂದುವುದನ್ನು ಕಾಣಬಹುದು.

"ಹೀಗೆ ತಮ್ಮ ಅವನತಿಯ ಬಗ್ಗೆ ತಿಳಿದು ಸುಮ್ಮನಿರುವ ಜನ ಒಂದುಕಡೆಯಾದರೆ, ಗೋಸಾಯಿಗಳ ಸಮುದಾಯಕ್ಕೆ ತನ್ನ ಅವನತಿಯ ಅರಿವೇ ಇಲ್ಲ. ಕೆಸರೂರಿನ ಜನರೆಲ್ಲಾ ಪ್ರಜ್ಞಾಪೂರ್ವಕವಾಗಿಯೇ ಪ್ರಕೃತಿಯೊಡನೆ, ವ್ಯಕ್ತಿ-ವ್ಯಕ್ತಿಗಳೊಡನೆ ಸ್ವಾರ್ಥಪೂರಿತ ಕೃಷ್ಣಪ್ಪಗೌಡ, ಆ ಹುಡುಗರು ಸಂಘರ್ಷಕ್ಕೆ ಇಳಿದಿದ್ದರೆ, ಗೋಸಾಯಿಗಳು ಅಪ್ರಜ್ಞಾಪೂರ್ವಕವಾಗಿ ಪ್ರಕೃತಿಯೊಡನೆ ಹಕ್ಕಿ-ಪಕ್ಷಿಗಳನೆಲ್ಲ ಹಿಡಿಯುವುದರೊಂದಿಗೆ ವ್ಯಭಿಚಾರವನ್ನೇ ಸಾಮಾನ್ಯಗೊಳಿಸುವ ಮೂಲಕ ಸಂಸ್ಕೃತಿಯೊಡನೆ ಅಧಃಪತನಕ್ಕೆ ದಾರಿಯಾಗುವುದು. ಈ ಗೋಸಾಯಿಗಳು ಕೆಸರೂರಿನ ಸಮಾಜದಗದೇ ಭವಿಷ್ಯದ ಚಿತ್ರಗಳಂತೆ ಕಾಣುತ್ತಾರೆ. ಎಲ್ಲಿ ಸಂಸ್ಕೃತಿಯ ಅವನತಿ ವರ್ತಮಾನ ಮತ್ತು ಭವಿಷ್ಯಗಳೆರಡರಲ್ಲೂ ಸಮಗ್ರವಾಗಿ ಚಿತ್ರಣಗೊಂಡಿದೆ."[೬]

ವಾಸ್ತವದಲ್ಲಿ ಮನೆ ಮೇಲೆ ಕಲ್ಲು ಬೀಳುವುದು, ಧರ್ಮಾಂಧರ ಮತೀಯ ರಾಜಕೀಯ, ಹುಡುಗರ ಕ್ರಾಂತಿ ಎಂಬ ಭ್ರಮೆ, ರಫಿ, ಜಯಂತಿಯರ ಪ್ರೇಮ, ಬೇರೆಯ ಕಪ್ಪು ವ್ಯವಹಾರಗಳು, ಗೋಸಾಯಿಗಳ ಅನುದ್ದೇಶಿತ ಬದುಕು ಇವುಗಳ ಜೊತೆ ಜೋಗಿಹಾಳರ ಸಾವು, ಮಾನವ ಪ್ರಜ್ಞೆಯ ಚಿತ್ರಗಳಿವೆ. ಇಲ್ಲಿ ಕಾಳದಂಧೆಗೆ ಸರ್ಕಾರ, ಕಾನೂನು ಮತ್ತು ನ್ಯಾಯಾಲಯಗಳ ಸಮ್ಮತಿ ಪರವಾನಗಿಗಳನ್ನು ಗಿಟ್ಟಿಸಿಕೊಂಡು ನಡೆಸುತ್ತಿರುವ ಹಗಲು ದರೋಡೆಗಳಿಂದ ಇಡೀ ಸಂಸ್ಕೃತಿಯನ್ನು ಒಂದಲ್ಲಾ ಒಂದು ದಿನ ದುರಂತಕ್ಕೆ ಒಡ್ಡುವ ಭೀಕರ ಚಿತ್ರವಿದೆ.

ಕಿರಗೂರಿನ ಗಯ್ಯಾಳಿಗಳಲ್ಲಿ 'ಕಿರಗೂರು' ಎಂಬ ಊರು ನೀಡುವ ಸಂಸ್ಕೃತಿಯ ಆಹ್ವಾನ ಲವಲವಿಕೆಯದ್ದು. ಪ್ರಕೃತಿ ಸಹಜ ಎಲ್ಲ ಕ್ರಿಯಾವಳಿಗಳಿಗೂ ಇದು ತೆರೆದು ನಿಂತ ಊರು. ತನ್ನ ಸಹಜ ಸ್ಥಿತಿಯನ್ನು ಸಹಜವಾಗಿಯೇ ಅನಾವರಣಗೊಳಿಸುತ್ತದೆ. ಬಿರುಗಾಳಿಯ ತುಳಿತ ಎಂಬುದು ಸೀಗೇಗೌಡನ ಮನೆಯ ಮೂಲಕ ಹೆಬ್ಬಲಸಿನ ಮರದ ಬೇರು ಅಲ್ಲಾಡಿ ಸೀಗೆಗೌಡನ ಮನೆ ಅಲುಗಾಡುವುದರ ಜೊತೆಗೆ ಅಲ್ಲಿನ ಇಡೀ ಸಂಸ್ಕೃತಿಯೇ ಅಲುಗಾಡುವುದನ್ನು ಕಾಣಬಹುದು. ಕಿರಗೂರಿನ ಸಂಸ್ಕೃತಿ ಯಾವಾಗಲೂ ಅವನತಿಯನ್ನು ಹೊಂದುತ್ತಲೇ ಇದೆ. ಹೇಗೆಂದರೆ ಆ ಊರಿನ ಗಂಡಸರಿಗೆ ಹೆಂಗಸರು

ಬುದ್ಧಿ ಕಲಿಸಿದರೂ ಸಹ ಅಲ್ಲಿ ಇನ್ನೊಂದು ಹೆಂಡದ ಸನಸ್ಯೆ ತಲೆದೋರುತ್ತದೆ. ಅಲ್ಲಿಗೆ ಕತೆ ಮುಗಿಯಿತೆಂದುಕೊಂಡರು ಸಹ ಕತೆ ಅಲ್ಲಿಗೆ ಮುಗಿಯದೇ ಕಿರಗೂರಿನ ಸಂಸ್ಕೃತಿಯ ಸಮಸ್ಯೆ ಮುಂದುವರಿದುಕೊಂಡು ಹೋಗುವುದನ್ನೇ ಕಾಣಬಹುದು.

ಅಬಚೂರಿನ ಪೊಸ್ಟಾಫೀಸು ಕತೆಯಲ್ಲಿ ಸಹ ಒಂದು ಸಾಮಾಜಿಕ ಸಂಸ್ಕೃತಿಯ ಹಿನ್ನೆಲೆಯಲ್ಲಿ ಅಬಚೂರಿನ ಸಂಸ್ಕೃತಿ ಎಂಬುದು ಅವನತಿ ಹೊಂದುತ್ತದೆ. ಅಬಚೂರಿಗೆ ಹೊಸದಾಗಿ ಬಂದ ಪೊಸ್ಟಾಫೀಸು ಅದರಿಂದ ಉಂಟಾದ ಪರಿಣಾಮ ಆ ಊರಿನ ಸಂಸ್ಕೃತಿ ಮತ್ತು ಬೋಬಣ್ಣನ ಜೀವನವನ್ನು ಬಿರುಗಾಳಿಗೆ ತೂರುತ್ತದೆ. ಯಾವೂದೋ ನಗ್ನ ಚಿತ್ರವನ್ನು ನೋಡಿದ ಬೋಬಣ್ಣನ ಮನಸ್ಸಿನಲ್ಲಿ ಅಲ್ಲೋಲ ಕಲ್ಲೋಲವಾಗುತ್ತದೆ. ಅತ್ತೆ ಮಾಚಮ್ಮನ ಸ್ವಾರ್ಥ ಕೂಡ ಬೋಬಣ್ಣನ ಜೀವನದಲ್ಲಿ ಬಿರುಗಾಳಿ ಎಬ್ಬಿಸುತ್ತದೆ. ಜೊತೆಗೆ ಬೇಲಾಯದನ ಮಗಳು ಪದ್ಮಿಯ ವಿಚಾರವಾಗಿ ಬೇಲಾದಯನಿಗೆ ಒಂದು ಕಾಗದ ಬಂದಿರುತ್ತದೆ. ಅದನ್ನು ಬೋಬಣ್ಣ ಓದಿ ತನ್ನ ಆಫೀಸಿನ ಬುಟ್ಟಿಯಲ್ಲಿ ಎಲ್ಲರೂ ಓದಲಿ ಎಂದು ಹಾಕುತ್ತಾನೆ ಅದನ್ನು ಇಡೀ ಊರಿನ ಜನರೇ ಓದುತ್ತಾರೆ. ಅದು ಹರಿದು ಹೋದ ಮೇಲೆ ಅದನ್ನು ತಲುಪಿಸಬೇಕಾದವರಿಗೆ ತಲುಪಿಸದೇ ಹೋದರೆ ಸರಿಯಲ್ಲ ಎಂದು ಬೋಬಣ್ಣನೇ ಒಂದು ಪತ್ರವನ್ನು ಬರೆದು ಬೇಲಾಯದನ ವಿಳಾಸಕ್ಕೆ ತಲುಪಿಸುತ್ತಾನೆ. ಅದಾದ ನಂತರ ಬೇಲಾಯದನ ಗುಂಪು ಮತ್ತು ಬೋಬಣ್ಣನಿಗೆ ಜಗಳ ನಡೆಯುತ್ತವೆ. ಆ ಸಂದರ್ಭದಲ್ಲಿ ಬೇಲಾದಯನ ಮುಖಕ್ಕೆ ಬೋಬಣ್ಣ ಗುದ್ದುದಾಗ ಅವನು ಪ್ರಜ್ಞೆ ತಪ್ಪಿ ಬೀಳುತ್ತಾನೆ. ಅಲ್ಲಿ ಇನ್ನೇನೋ ಘಟನೆ ಘಟಿಸುವುದೆಂದು ತಿಳಿದು ಬೋಬಣ್ಣನು ಅಬಚೂರನ್ನು ಬಿಟ್ಟು ಯಾರಿಗೂ ಗೊತ್ತಿಲ್ಲದಂತೆ ಪರಾರಿಯಾಗುತ್ತಾನೆ. ಪೋಸ್ಟಾಫೀಸನ್ನು ವಿದ್ಯುಕ್ತವಾಗಿ ಮುಚ್ಚಲಾಗುತ್ತದೆ. ಆಧುನಿಕತೆ ಪ್ರವೇಶಿಸಿದಂತೆ ಹೇಗೆ ಒಂದು ಸಂಸ್ಕೃತಿ ನಾಶ ಹೊಂದಿತೆಂಬುದನ್ನು ಕಾಣಬಹುದು. ಅಬಚೂರಿನ ಪೋಸ್ಟಾಫೀಸು ಕತೆಯಲ್ಲಿ ಕಾಣಬಹುದು. ಇಲ್ಲಿ ಮಾನವ ಆಧುನಿಕತೆಯನ್ನು ತನ್ನ ಸ್ವಾರ್ಥಕ್ಕೆ ಬಳಸಿಕೊಳ್ಳುತ್ತಾನೆ. ಅದೇ ಅವನ ದುರಂತಕ್ಕೆ ಕಾರಣವಾಗುತ್ತದೆ.

'ಹುಲಿಯೂರಿನ ಸರಹದ್ದು' ಕತೆಯಲ್ಲಿ ಜೀವನದ ಸರಪಳಿಯಲ್ಲಿ ಒಬ್ಬರು ಇನ್ನೊಬ್ಬರಿಗೆ ಸರಪಳಿಯಾಗಿ ನಿಲ್ಲುತ್ತಾರೆ. ಆದರೆ ಆ ಸರಪಳಿಯಿಂದ ಹೊರಗೆ ಬಂದರೆ ಸೋಲೇ ವಿನಃ ಗೆಲುವಿಲ್ಲ ಎಂದು ಕತೆ ಸೂಚಿಸುತ್ತದೆ. ವ್ಯಕ್ತಿಯ ವಿಕಸನಕ್ಕೆ ಮಿತಿಯಾಗಿ ನಿಲ್ಲಬಲ್ಲ ಪ್ರೀತಿ, ರಕ್ತಸಂಬಂಧ, ದೇವರು, ಧರ್ಮ, ಜಾತೀಗಳೇ ಇಲ್ಲಿ ಒಂದಕ್ಕೊಂದು ಹೆಣೆದುಕೊಂಡು

ನಿಂತು ಸರಹದ್ದುಗಳಾಗಿವೆ. ಈ ಕತೆಯ ನಾಯಕ ಸೋಮು. ಗರುಡವನ್ನು ದೇವರು ನಾನು ಹೊಡೆಯುವುದಿಲ್ಲ ಎನ್ನುವ ಸೋಮುವನ್ನು ತಂದೆ ರಂಗಪ್ಪಗೌಡ ಚೆನ್ನಾಗಿ ಬೈತಾನೆ. ಅಲ್ಲಿ ಅವನ ತಂದೆ ಬಯ್ಯುವ ಮಾತಿನಲ್ಲಿ ಜಾತಿ, ಕುಲಗಳೊಂದಿಗೆ ದೇವರು ದಿಂಡ್ರು, ಧರ್ಮ ಹೀಗೆ ಒಂದಕ್ಕೊಂದು ತಳಕು ಹಾಕಿಕೊಂಡೇ ನಮ್ಮ ಸಂಸ್ಕಾರ ಸಂಸ್ಕೃತಿಯ ಗಡಿಯನ್ನು ದಾಟಿ ಅವನು ಹೋಗಬೇಕೆಂದು ತೀರ್ಮಾನಿಸುತ್ತಾನೆ. ಕೊನೆಗೆ ತಂದೆ, ತಾಯಿ, ಹುಲಿಯೂರು ಎಲ್ಲವನ್ನು ಬಿಟ್ಟು ದೇವರು ಎಂದು ನಂಬಿದ್ದ ಗರುಡವನ್ನೇ ಕೊಂದು ಹೋಗುತ್ತಾನೆ. ಇಲ್ಲಿ ಹುಲಿಯೂರಿನ ಸರಹದ್ದನ್ನು ಪಾರು ಮಾಡಿದವರಿಗೆ ನೋವು ಶಾಶ್ವತವೆಂದು ಈ ಕತೆಯ ಮೂಲಕ ಸೂಚ್ಯವಾಗಿ ತಿಳಿಸಿದ್ದಾರೆ. ಒಂದು ಸಂಸ್ಕೃತಿಯ ಬದಲಾವಣೆ ಎಂಬುದು ಒಬ್ಬನಿಂದ ಮಾತ್ರ ಸಾಧ್ಯವಾಗುವುದಿಲ್ಲ. ಇಡೀ ಸಮುದಾಯದಿಂದ ಮಾತ್ರ ಸಾಧ್ಯ ಎಂಬುದನ್ನು ಈ ಕತೆ ಧ್ವನಿಸುತ್ತದೆ.

ತುಕ್ಕೋಜಿ ಕತೆಯು ಹಳ್ಳಿಯ ಪರಿಸರದಲ್ಲಿ ಆಧುನಿಕತೆಯ ಆಕ್ರಮಣದಿಂದ ಹೇಗೆ ಒಂದು ಜನಾಂಗದ ಜೀವನ ಸಂಸ್ಕೃತಿ ಬದಲಾವಣೆಗೆ ಒಳಪಡುತ್ತದೆ ಎಂಬುದನ್ನು ವೈಯಕ್ತಿಕ ಜೀವನದಲ್ಲಿ ಉಂಟಾದ ಕೆಲವು ವೈಪರೀತ್ಯಗಳು ಹಾಗೂ ರೈಲ್ವೆ ನಿಲ್ದಾಣದ ಆಗಮನದಿಂದ ಊರಿನ ಸಂಸ್ಕೃತಿಯ ಮೇಲೆ ಆಗುವ ಪರಿಣಾಮವನ್ನು ಬಹಳ ಸ್ವಾರಸ್ಯವಾಗಿ ಚಿತ್ರಿಸಿದ್ದಾರೆ. ತುಕ್ಕೋಜಿ ಮತ್ತು ಸರೋಜಳ ಜೀವನದಲ್ಲಿ ಒಂದು ಗಂಡು ಮಗುವಿನ ಆಗಮನದಿಂದ ದಾಂಪತ್ಯ ಹಾಗೂ ಕೆಲಸದಲ್ಲಿ ಬಿರುಕು ಬಿಡುತ್ತದೆ. ಅದೇ ಸಮಯಕ್ಕೆ ಗುರುಗಳ್ಳಿ ಸಂಸ್ಕೃತಿಯ ಅಭಿವೃದ್ಧಿಗಾಗಿ ಕೈಗೊಳ್ಳುವ ಕ್ರಮಗಳು, ಅಲ್ಲಿ ಜನ ತಿಳಿದಿರುವ ತಪ್ಪು ಗ್ರಹಿಕೆ ಎಲ್ಲವೂ ಅಲ್ಲಿ ನಾಶ ಹೊಂದುವುದನ್ನು ಕಾಣಬಹುದು.

ಜುಗಾರಿಕ್ರಾಸ್ ಕಾದಂಬರಿಯಲ್ಲಿ ಸುರೇಶ ರಾಜಪ್ಪನಿಗೆ ಹಣವನ್ನು ನೀಡಿ ಆ ಕಡತವನ್ನು ತೆಗೆದುಕೊಂಡಾಗ ಅವಳಿಗೆ ಬೇಸರವಾಗುವುದಿಲ್ಲ ಆ ಸಂದರ್ಭದಲ್ಲಿ ಅವಳು ಹೇಳುವ ಮಾತೆಂದರೆ "ದುಡ್ಡು ಮುಖ್ಯ ಅಲ್ಲ, ಎಲ್ಲಿ ಇಂತದೊಂದು ಅದ್ಭುತ ಸಂಗತಿ ಇರುವಾಗ ಅದರ ಬಗ್ಗೆ ಕುತೂಹಲವಾದರೂ ಬೇಡವೆ ನಮಗೆ ನದೀ ಮೂಲ ಹಿಡಿಯುವುದಕ್ಕೆ ಎವರೆಸ್ಟ್ ಹತ್ತೋದಿಕ್ಕೆ ಎಷ್ಟೊಂದು ಜನ ಪ್ರಯತ್ನಪಟ್ಟಿದ್ದಾರೆ. ಅವರಿಗೆಲ್ಲ ದುಡ್ಡಿನ ಆಸೆ ಇತ್ತ?' ಎಂದು ಹೇಳುವಲ್ಲಿ ಅರ್ಥಸಂಸ್ಕೃತಿಯ ಬೆನ್ನುಹತ್ತಿ ಹೊರಟಿರುವ ಆಧುನಿಕ ಸಮಾಜದ ವಿಕೃತಿಯನ್ನೂ, ಅದರೊಳಗೆ ಇರುವ ಆರೋಗ್ಯಕರ ಬದುಕಿನ ಸಾಧ್ಯತೆಗಳನ್ನು ತೇಜಸ್ವಿ ಇಲ್ಲಿ ಸೂಚಿಸಿದ್ದಾರೆ.

ಅಂದರೆ ಆಧುನಿಕತೆ ಎಂಬುದು ಮಾನವನ ಜೀವನದಲ್ಲಿ ಪ್ರವೇಶಿಸಿದಂತೆ ಅದನ್ನು ಮಾನವ ತನ್ನ ಬುದ್ಧಿಯಿಂದ ಉಳಿಸಿಕೊಳ್ಳುವ ಬದಲು ಅದನ್ನು ತನ್ನ ಬುದ್ದಿ ಶಕ್ತಿಯಿಂದಲೇ ಹಾಳು ಮಾಡಲು ಪ್ರಯತ್ನಿಸುತ್ತಿದ್ದಾನೆ.

ಮಾಯಲೋಕ-೧ ರಲ್ಲಿ ತಮ್ಮ ತಾತ್ವಿಕ ಅನ್ವೇಷಣೆಯ ಅಚಿತಿಮ ಪಯಣ ಕೈಗೊಂಡಂತೆ ತೇಜಸ್ವಿ ಈ ಕೃತಿಯಲ್ಲಿ ಮಾಯೆಯೆಂದರೆ ಮತ್ತೇನಲ್ಲ. ಅಪರಿಚಿತತೆ ಹಾಗೂ ಆ ಅಪರಿಚಿತತೆ ಉಂಟು ಮಾಡುವ ಅನುಮಾನ-ಆತಂಕ-ಆಘಾತಗಳ ಪರಿಣಾಮ ಸ್ವರೂಪವೇ ಆಗಿದೆ ಎಂದು ನಿರೂಪಿಸುತ್ತಾ, ಹೊರಗಿನ ಸಂಸ್ಕೃತಿಯಿಂದ ಬಂದ ಯಾವುದೋ ಜೀವ ಅಥವಾ ವ್ಯಕ್ತಿ ಅಥವಾ ವಿಚಾರ ಸ್ಥಳೀಯಗೊಳ್ಳದೇ ಹೋದರೆ ಅದು ಒಂದಲ್ಲ ಒಂದು ಹಂತದಲ್ಲಿ ಅಥವಾ ರೂಪದಲ್ಲಿ ಸ್ಥಳೀಯ ಸಂಸ್ಕೃತಿಯನ್ನು ವಿಭ್ರಮೆಗೆ ಸಿಲುಕಿಸಿ ಅನಾಹುತಗಳಿಗೆ ಎಡೆ ಮಾಡಿಕೊಡುತ್ತದೆ ಎಂದು ಸೂಚಿಸುತ್ತದೆ. ಇಲ್ಲಿ ಸಂಸ್ಕೃತಿ ಎಂದರೆ ಜೀವನ ಕ್ರಮ ಆಗಿದೆ. ಕಳೆದ ಐವತ್ತು ವರ್ಷಗಳಲ್ಲಿ ಗ್ರಾಮೀಣ ಕರ್ನಾಟಕ ಕಂಡ ಪ್ರಾಕೃತಿಕ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಬದಲಾವಣೆಗಳನ್ನು ಇಲ್ಲಿ ಕಟ್ಟಿಕೊಟ್ಟಿದ್ದಾರೆ.

ಹೀಗೆ ನಾವು ಪ್ರಕೃತಿ ಪಾತ್ರದ ವೈಶಿಷ್ಟತೆಯಲ್ಲಿ ಪ್ರಕೃತಿ ಮತ್ತು ಸಂಸ್ಕೃತಿಯ ಪಾತ್ರವನ್ನು ನಾವು ಗಮನಿಸಬಹುದಾಗಿದೆ.

* * * * *

---

<u>ಅಡಿಟಿಪ್ಪಣಿ :</u>

1. ತೇಜಸ್ವಿ ಸಾಹಿತ್ಯ ಕೃಷಿ, ಡಿ.ವಿ.ಪ್ರಹ್ಲಾದ್, ಪುಟ 20
2. ಮಯೂರ:ಸಂಪಾದಕ, ಜೂನ್ 2007.
3. ತೇಜಸ್ವಿ ಸಾಹಿತ್ಯ ಕೃಷಿ ಜಿ.ಟಿ. ವೀರಪ್ಪ ಮತ್ತು ಎಂ. ಬೈರೇಗೌಡ- ಪುಟ 108
4. ತೇಜಸ್ವಿ ಲೋಕ : ಡಿ.ವಿ. ಪ್ರಹ್ಲಾದ್-ಪುಟ 9.
5. ತೇಜಸ್ವಿ ಕಥನ: ಅಶೋಕ ಟಿ.ಪಿ., ಪುಟ 41
6. ತೇಜಸ್ವಿ ಲೋಕ ; ಡಿ.ವಿ. ಪ್ರಹ್ಲಾದ್ - ಪುಟ 14.

# ಅಧ್ಯಾಯ-6

# ಪ್ರಕೃತಿಯ ಚಿತ್ರಣದಲ್ಲಿ ತೇಜಸ್ವಿ ವೈಶಿಷ್ಟ್ಯತೆ

## (ಇತರ ಪ್ರಮುಖ ಸಮಕಾಲೀನ ಹಿರಿಯ ಲೇಖಕರೊಡನೆ ತೌಲನಿಕ ಅಧ್ಯಯನ)

ತೇಜಸ್ವಿಯವರ ಕಥಾ ಸಾಹಿತ್ಯದ ಮೇಲೆ ಕಾರಂತರ ಪ್ರಯೋಗಶೀಲತೆ, ಕುವೆಂಪು ಅವರ ಕಲಾತ್ಮಕತೆ, ಲೋಹಿಯಾ ಅವರ ವಿಚಾರಧಾರೆಗಳು, ಜೀವನಪ್ರೀತಿ, ಪ್ರಯೋಗಗಳು ಅವರ ಬರವಣಿಗೆಯ ಪ್ರೇರಣೆಗಳಾಗಿವೆ. ಇವರೆಲ್ಲರ ಪ್ರೇರಣೆಯಿಂದ ತಮ್ಮ ಸಾಹಿತ್ಯದಲ್ಲಿ ಪ್ರಕೃತಿಯನ್ನು ವಸ್ತುವಾಗಿ ತೆಗೆದುಕೊಂಡಿದ್ದರೂ ತೇಜಸ್ವಿ ಇತರ ಲೇಖಕರಿಗಿಂತ ಪ್ರಕೃತಿಯನ್ನು ನೋಡಿರುವ ರೀತಿಯಲ್ಲಿ ನಾವು ಭಿನ್ನತೆಗಳನ್ನು ಕಾಣಬಹುದು. ಆ ರೀತಿ ನೋಡುವುದಾದರೆ ಕುವೆಂಪು, ಕಾರಂತ, ಬಿ.ಜೆ.ಎಲ್. ಸ್ವಾಮಿ ಇವರ ಸಾಹಿತ್ಯದಲ್ಲಿನ ಪ್ರಕೃತಿ ಮತ್ತು ತೇಜಸ್ವಿ ಸಾಹಿತ್ಯದ ಪ್ರಕೃತಿಗೂ ಇರುವ ಹೋಲಿಕೆ-ವ್ಯತ್ಯಾಸಗಳನ್ನು ನೋಡೋಣ.

### ತೇಜಸ್ವಿ ಮತ್ತು ಕುವೆಂಪು:

ತೇಜಸ್ವಿ ಹುಟ್ಟಿದ್ದು, ಕುಪ್ಪಳ್ಳಿ, ಬಾಲ್ಯ ಕಳೆದದ್ದು, ಮೈಸೂರಿನಲ್ಲಿ ಕನ್ನಡದ ಮೇರು ಕವಿ ಕುವೆಂಪು ಹುಟ್ಟಿದ್ದು ಕುಪ್ಪಳ್ಳಿ, ಬಾಲ್ಯ ಕಳೆದದ್ದು ಕುಪ್ಪಳ್ಳಿ ಸಾಹಿತ್ಯಕ್ಕೆ ಸ್ಪೂರ್ತಿ ನೀಡಿದ್ದು, ಕುಪ್ಪಳ್ಳಿ ಜೀವನ ಕಳೆದದ್ದು ಮೈಸೂರಿನಲ್ಲಿ, ಕುವೆಂಪು ಅವರಂತೆ ಮಲೆನಾಡಿನ ಜೀವನದ ಅನುಭವಗಳು ಅವರ ಕೃತಿಗಳಲ್ಲಿ ಅಭಿವ್ಯಕ್ತವಾಗಿವೆ. ಗಿರಿ-ಕಾನನಗಳ ಛಾಯಾಗ್ರಾಹಣ ಶಿಕಾರಿಗಳ ದಟ್ಟ ಅನುಭವಗಳು ಅವರ ಎಲ್ಲ ಲೇಖನಗಳಲ್ಲಿ ಚಿತ್ರಿತವಾಗಿವೆ. ಪ್ರಕೃತಿಯ ಭವ್ಯ ದೃಶ್ಯ ವೈಭವಗಳನ್ನು ಮಗುವಿನ ಸಹಜ ಕುತೂಹಲ, ಮುಗ್ಧತೆಗಳೊಂದಿಗೆ ವಿಶಿಷ್ಟವಾಗಿ ದಾಖಲಿಸಿದ್ದಾರೆ.

"ಕುವೆಂಪು ಮತ್ತು ತೇಜಸ್ವಿ ಅವರಿಬ್ಬರಿಗು ಮುಖ್ಯ ಮಾಧ್ಯಮ ಪ್ರಕೃತಿ ಆದರೆ, ಅವರಿಬ್ಬರು ಪ್ರಕೃತಿಯನ್ನು ನೋಡಿದ ಬಗೆಯಲ್ಲಿ ವ್ಯತ್ಯಾಸವಿದೆ. ಆರಾಧನೆ ಕುವೆಂಪುರವರಾದರೆ, ಶೋಧನೆ ತೇಜಸ್ವಿಯವರದು, ಇಲ್ಲಿ ಶೋಧನೆಗಿರುವ ವ್ಯಾಪ್ತಿ ಮತ್ತು ಆಯಾಮಗಳೆರಡೂ ಭಿನ್ನವಾದುದು. ವ್ಯಾಪ್ತಿಯ ವಿಸ್ತೃತತೆಯೇ ಪೂಚಂತೇ ಅವರ ಸಾಹಿತ್ಯದ ಲಕ್ಷಣ".[1]

ಕುವೆಂಪು ನೈಸರ್ಗಿಕ ಪರಿಸರವನ್ನು ಅವರ ಸಾಹಿತ್ಯದ ಅವಿಭಾಜ್ಯ ಅಂಗವಾಗಿ ಬಳಸಿಕೊಂಡರು. ಅವರ ಮಲೆಗಳಲ್ಲಿ ಮದುಮಗಳು ಕಾದಂಬರಿಯಾಗಲೀ, ವೈಚಾರಿಕ

ಭಾಷಣ ಮಾಡಲಿ, ಅದರಲ್ಲಿ ನಾವು ಗಮನಿಸಬಹುದಾದದ್ದು ಎಂದರೆ ಕುವೆಂಪು ಅವರನ್ನು ಅವರ ಪರಿಸರದಿಂದ ಪ್ರತ್ಯೇಕಿಸಲಾಗದ ಒಂದು ಮನೋಧರ್ಮ ಕಾಣಸಿಗುತ್ತದೆ. ಸಮಷ್ಟಿ ಪ್ರಜ್ಞೆ ಅವರ ಭಾಷೆಯಲ್ಲಿಯೇ ಅಂತರ್ಗತವಾಗಿದೆ. ಪರಿಸರ ಅವರ ಸಾಹಿತ್ಯದಲ್ಲಿ ಬೆಸೆದು ಹೋಗಿದೆ ಎನ್ನಬಹುದು. ಆದರೆ ಕುವೆಂಪು ಮತ್ತು ತೇಜಸ್ವಿಗೆ ಇರುವ ವ್ಯತ್ಯಾಸವೆಂದರೆ ಕುವೆಂಪು ಪರಿಸರವನ್ನು ನೋಡಿ ದಿಗ್ಭ್ರಮೆಗೊಂಡು ಆಧ್ಯಾತ್ಮಿಕದೆಡೆಗೆ ಹೋಗಿ ಪ್ರಕೃತಿಯಲ್ಲಿ ದೇವರನ್ನು ಕಂಡಿದ್ದನ್ನು ಕಾಣಬಹುದು.

"ಕುವೆಂಪುರವರ ಆಧ್ಯಾತ್ಮಿಕತೆಗೆ ತೇಜಸ್ವಿ ಒಂದು ಪರ್ಯಾಯ ವ್ಯವಸ್ಥೆಯನ್ನು ಸೃಷ್ಟಿಸಿದರು. ಆಧ್ಯಾತ್ಮೀಕರಣ ಎಲ್ಲೋ ಒಂದೆಡೆಗೆ ಧರ್ಮ ಮತ್ತು ಜಾತಿ ಈ ವ್ಯವಸ್ಥೆಗಳ ಜೊತೆಗೆ ತಳಕು ಹಾಕಿಕೊಂಡಿರುವುದರಿಂದ ಮತ್ತು ವೈಜ್ಞಾನಿಕ ಮನಸ್ಸೆಂದು ಕುವೆಂಪು ಹೇಳಿದರೂ ಕೂಡ ಆಧ್ಯಾತ್ಮಿಕತೆಯ ಮೂಲಕ ಮೌಢ್ಯಕ್ಕೆ ಕಾರಣ ಆಗುತ್ತದೆ ಎನ್ನುವುದನ್ನು ಗುರುತಿಸಿಕೊಂಡರು. ಆದ್ದರಿಂದಲೇ ತೇಜಸ್ವಿ ಅವರು ಕುವೆಂಪು ಅವರ ವೈಚಾರಿಕ ಚಿಂತನೆಗಳನ್ನೆಲ್ಲಾ ಕಲಾಸೃಷ್ಟಿ ಎಂದು ಮಾತ್ರ ತೆಗೆದುಕೊಂಡದ್ದು"[2].

"ಇಲ್ಲಿ ನಾವು ಒಂದು ವ್ಯತ್ಯಾಸವನ್ನು ಗಮನಿಸಬಹುದು. ಕುವೆಂಪು ಅವರು ಮಲೆನಾಡಿನಿಂದ ಪಟ್ಟಣಕ್ಕೆ ಬಂದವರು, ಅವರು ಪಟ್ಟಣದಲ್ಲಿದ್ದರೂ ಮಲೆನಾಡಿನ ಕಡೆ ಸೆಳೆತವಿರುತ್ತದೆ. ಆದರೆ ತೇಜಸ್ವಿ ಪಟ್ಟಣದಿಂದ ಮಲೆನಾಡಿಗೆ ಹೋಗಿರುವುದನ್ನು ಕಾಣಬಹುದು. ತಂದೆ ಮತ್ತು ಮಕ್ಕಳಲ್ಲಿ ಒಂದೇ ಒಂದು ವ್ಯತ್ಯಾಸವಿತ್ತು. ಅದೆಂದರೆ ಕುವೆಂಪು ಅವರು ಮಲೆನಾಡನ್ನು ಅಂದರೆ ಪ್ರಕೃತಿಯನ್ನು ಹತ್ತಿರದಿಂದ ನೋಡಿ ಅದರ ಸವಿಸವಿದಿದ್ದರು. ಆದರೆ ತೇಜಸ್ವಿ ಮಲೆನಾಡಿನಲ್ಲೇ ವಾಸ ಮಾಡುತ್ತಾ ಅಲ್ಲಿಯ ಜನರನ್ನು ಬಹಳ ಹತ್ತಿರದಿಂದ ನೋಡಿದವರಾಗಿದ್ದರು. ಪರಿಸರಕ್ಕೆ ಶೋಷಣೆ ಯಾಗುವುದನ್ನು ಸಹಿಸುತ್ತಿರಲಿಲ್ಲ."[3]

ಕುವೆಂಪು ಬರೆದದ್ದು ಭೂತಕಾಲದ್ದು, ಆದರೆ ತೇಜಸ್ವಿ ಬರೀತಾ ಇರೋದು ವರ್ತಮಾನದ್ದು, ಜೊತೆಗೆ ಕುವೆಂಪು ಮಲೆನಾಡಿನ ಬದುಕನ್ನು ದೂರ ನಿಂತು ನೋಡಿ ಚಿತ್ರಿಸಿದರೆ, ತೇಜಸ್ವಿ ಅವರ ಜೊತೆ ಬದುಕು ಸಾಗಿಸುತ್ತಲೇ ಚಿತ್ರಿಸಿದ್ದಾರೆ.

ಕುವೆಂಪು ಅವರ ಪರಮ ಔನ್ನತ್ಯದ ಪ್ರಭಾವಲಯದದಿಂದ ಪಾರಾಗುವುದು ತೇಜಸ್ವಿಂಯುವರ ಮುಂದಿದ್ದ ದೊಡ್ಡ ಸವಾಲಾಗಿತ್ತು. ಕುವೆಂಪು ಅವರ ಪುತ್ರನಾಗಿರುವುದರಿಂದಲೇ ಅವರಿಗೊಂದು ದುರ್ಗಮವಾದ ಆವರಣ ನಿರ್ಮಾಣವಾಗಿತ್ತು.

ಆ ಪರಿಸರದ ವಠಾರದಿಂದ ದೂರವಾಗಲು ತೇಜಸ್ವಿ ತಮ್ಮ ಮನೋಧರ್ಮಕ್ಕೆ ಅತ್ಯಂತ ಸಹಜವಾದ ವೃತ್ತಿ ಪ್ರವೃತ್ತಿಗಳಿಗಾಗಿ ಪಶ್ಚಿಮ ಘಟ್ಟಗಳ ಅರಣ್ಯದ ನಡುವೆ ಮಲೆನಾಡಿನ ಮೂಡಿಗೆರೆಯಲ್ಲಿ ಕಾಫಿ ಬೆಳೆಗಾರರಾಗಿ ನೆಲೆ ಕಂಡು ಕೊಂಡರು. ಅರಣ್ಯದ ಏಕಾಂತತೆ ಮತ್ತು ನಿಗೂಢತೆಯ ಪರಿಸರ ತೇಜಸ್ವಿಯವರ ಜೀವನ ಶೈಲಿಯ ಕೇಂದ್ರ ಪ್ರಜ್ಞೆಯಾಗಿ ವಿಕಾಸವಾಯಿತು.

"ವಿಜ್ಞಾನದ ಪರಿಶುದ್ಧ ಚಿಂತನೆಗೂ ವಿಜ್ಞಾನ ನಾಂದಿ ಹಾಡುವ ತಂತ್ರಜ್ಞಾನ, ಕೈಗಾರಿಕತೆ, ಆರ್ಥಿಕತೆಗೂ ವ್ಯತ್ಯಾಸವಿದೆ. ಶುದ್ಧ ವೈಜ್ಞಾನಿಕ ಚಿಂತನೆ ಒಂದು ಶ್ರದ್ದೆಯಾಗಿ ಕುವೆಂಪು ಅವರ ಸೃಜನಶೀಲ ಸಾಹಿತ್ಯದಲ್ಲಿ ಅಪ್ರಜ್ಞಾಪೂರ್ವಕವಾಗಿ ಸಮಯೋಚಿತವಾಗಿ ಬೆರೆತಿದ್ದರೆ ತೇಜಸ್ವಿಯವರ ಸಾಹಿತ್ಯದಲ್ಲಿ ಅದು ಪ್ರಜ್ಞಾಪೂರ್ವಕವಾಗಿ ಬಳಕೆಯಾಗುತ್ತದೆ. ಕುವೆಂಪು ವಿಜ್ಞಾನವನ್ನು ಒಂದು ರೀತಿಯ ಧಾರ್ಮಿಕ ಶ್ರದ್ದೆಯಿಂದ ಆರಾಧಿಸಿದ್ದಾರೆ ಹಾಗೂ ಸಾಮಾಜಿಕ ಕಥನದ ವಿಶ್ಲೇಷಣೆಗೆ ಬಳಸಿದ ಆ ಚಿಂತನೆಗಳನ್ನು ಕಲೆಯ ಮಟ್ಟಕ್ಕೆ ಬಯ್ದಿದ್ದಾರೆ"[4].

"ಕುವೆಂಪುರವರಿಗಿಂತ ತೇಜಸ್ವಿ ಹೆಚ್ಚು ಹೋರಾಟದ ಹಿನ್ನೆಲೆ, ದಾರ್ಶನಿಕತೆ ಅಥವಾ ಕುತೂಹಲದ ನೋಟ ಸರಳ ಪಾತ್ರದಲ್ಲಿಯೇ ಒಂದು ಒಳ್ಳೆಯದನ್ನು ಸೃಷ್ಟಿಸುವ ಕ್ರಿಯೆ ತೇಜಸ್ವಿಗೆ ತಿಳಿದಿತ್ತು. ಕುವೆಂಪು ಅವರಿಗಿಂತ ದೊಡ್ಡ ಹಿನ್ನೆಲೆ ಇವರದು. ಏಕೆಂದರೆ ಅಜ್ಜನ ಹೆಗಲ ಮೇಲೆ ಕುಳಿತ ಮೊಮ್ಮಗನ ಹಾಗೆ ಕುವೆಂಪು ಅವರ ಎಲ್ಲಾ ಹಿನ್ನೆಲೆಗಳನ್ನು ತನ್ನೊಳಗಿಟ್ಟುಕೊಂಡು, ಆ ನಂತರದ ಸಾಮಾಜಿಕ ಹೋರಾಟಗಳ ವಿವರಗಳನ್ನು ತಮ್ಮೊಳಗೆ ಇಟ್ಟುಕೊಂಡು ಈ ಸಮಾಜದ ಎಲ್ಲರಿಗೂ ತೋರಿಸುವ ಶಕ್ತಿ ತೇಜಸ್ವಿ ಅವರ ಸಣ್ಣ ಸಣ್ಣ ಪಾತ್ರಗಳಲ್ಲಿ ಕೂಡ ಅದು ಅಭಿವ್ಯಕ್ತವಾಗಿದೆ".[5]

ತೇಜಸ್ವಿ ಸಾಹಿತ್ಯದಲ್ಲಿ ಹುಡುಕಾಟ, ಪತ್ತೇದಾರಿಕೆ ಎಂಬ ಮಾತು ಇದೆ. ಆದರೆ ಕುವೆಂಪು ಅವರ ಎಲ್ಲಾ ಸಾಹಿತ್ಯದಲ್ಲೂ ಪ್ರಕೃತಿಯ ಬಗ್ಗೆ ಸೃಷ್ಟಿಯ ಬಗ್ಗೆ ಆರಾಧನಾ ಭಾವನೆ ಇತ್ತು. ಅದಕ್ಕೆ ಕಾರಣ ಅವರು ಬಹುಶ: ರಾಮಕೃಷ್ಣಾಶ್ರಮದಲ್ಲಿದ್ದದ್ದು ಕಾರಣವಿರಬಹುದು. ಇಲ್ಲಿ ಆರಾಧನಾ ಮನೋಭಾವನೆಗಿಂತ ಅನ್ವೇಷಣಾ ಪ್ರಜ್ಞೆ ಮುಖ್ಯವಾದದ್ದು.

"ಯಾರೋ ಕೆಲವರು ಕುವೆಂಪು ಅವರಲ್ಲಿ ಹೋಗಿ ಕೇಳಿದರಂತೆ, "ಏನ್ಸಾರ್, ನೀವು ನೋಡಿದರೆ ನವೋದಯ ಸಾಹಿತ್ಯ, ರಮ್ಯ ಸಾಹಿತ್ಯ, ನಿಸರ್ಗ, ದೇವರು, ವಿಶ್ವಮಾನವ ಇಂತಹ ಪರಿಭಾಷೆಯಲ್ಲಿ ಮಾತನಾಡ್ತೀರಿ. ನಿಮ್ಮ ಮಗ ನೋಡಿದರೆ ವಿಚಾರವಾದ,

ನವ್ಯ ಸಾಹಿತ್ಯ ಅಂತಾರೆ, ದೇವರನ್ನು ನಂಬಬೇಡಿ ವಿಜ್ಞಾನ ಮುಖ್ಯ ಅಂತಾರೆ, ಅಂದರಂತೆ.

ಅದಕ್ಕುತ್ತರವಾಗಿ ಕುವೆಂಪು ನಾನೇರಿದೆತ್ತರಕ್ಕೆ ಅವನೇರಬಲ್ಲನೆ ಅಂದರಂತೆ, ಅದನ್ನು ಕೇಳಿಸಿಕೊಂಡು ಬಂದವರು ತೇಜಸ್ವಿ ಹತ್ತಿರ ಹೋಗಿ "ಏನ್ಸಾರ್, ನಾವು ಹೀಗೀಗೆ ಅಂತ ಕುವೆಂಪುರಲ್ಲಿ ಹೇಳಿದೆವು. ಅದಕ್ಕೆ ಅವರು ನಾನೇರಿದೆತ್ತರಕ್ಕೆ ಅವನೇರಬಲ್ಲನೆ ಅಂದರು ಸಾರ್, ಅಂದರಂತೆ, ಅದಕ್ಕೆ ತೇಜಸ್ವಿ "ಅಲ್ರೀ, ನಾನು ಮುಳುಗಿದಾಳಕ್ಕೆ ಕುವೆಂಪು ಮುಳುಗುತ್ತಾರೇನ್ರಿ ? ಹೋಗ್ರಿ, ಹೋಗ್ರಿ" ಎಂದರಂತೆ.[6]

ಹೀಗೆ ತೇಜಸ್ವಿ ತಂದೆ ಕುವೆಂಪು ಅವರ ಪ್ರಭಾವಲಯದಿಂದ ಹೊರಬಂದು ಸಾರಸ್ವತ ಪ್ರಪಂಚದಲ್ಲಿ ತಮ್ಮದೇ ಆದಂತಹ ಛಾಪು ಮೂಡಿಸಿದ ಅದ್ಭುತ ಪ್ರತಿಭೆ ತೇಜಸ್ವಿಯವರದು. ತೇಜಸ್ವಿ ಇಲ್ಲಿ ತಾವು ಎಲ್ಲವನ್ನು ಅನುಭವಿಸಿ ಅದನ್ನು ಸಾಹಿತ್ಯದ ರೂಪದಲ್ಲಿ ಕಟ್ಟಿಕೊಟ್ಟಿದ್ದಾರೆ. ಅವರ ಜೀವನದ ಪ್ರಯೋಗಗಳನ್ನು ಕಾಣಬಹುದು.

**ತೇಜಸ್ವಿ ಮತ್ತು ಕಾರಂತ :**

ನವೋದಯ ಕಾಲದ ಪ್ರಸಿದ್ಧ ಲೇಖಕರಾದ ಶಿವರಾಮ ಕಾರಂತರು ಪ್ರಸಿದ್ಧ ಕಥೆಗಾರ ಕಾದಂಬರಿಕಾರರಾಗಿದ್ದಾರೆ. ಇವರು ತಮ್ಮ ಕಥೆ, ಕಾದಂಬರಿ, ಮಕ್ಕಳ ಸಾಹಿತ್ಯಗಳಲೆಲ್ಲಾ ವಿಜ್ಞಾನ ಮತ್ತು ಪ್ರಕೃತಿಯನ್ನೇ ವಸ್ತುವಾಗಿ ತೆಗೆದು ಕೊಂಡಿರುವುದನ್ನು ಕಾಣಬಹುದಾಗಿದೆ. ನಾವು ಈಗಾಗಲೇ ಕಾರಂತರ ಜೀವನ ಪ್ರಂಯೊಗಶೀಲತೆಯುನ್ನು ತೇಜಸ್ವಿ ಅಳವಡಿಸಿಕೊಂಡಿರುವುದನ್ನು ತಿಳಿದಿದ್ದೇವೆ. ಪ್ರತಿಯೊಬ್ಬ ಲೇಖಕನೂ ತಾನು ಕಂಡದ್ದನ್ನು ತನ್ನ ಮನಸ್ಸು ಗ್ರಹಿಸಿದ್ದನ್ನು ದಾಖಲಿಸಲು ಸಾಧ್ಯ. ಈ ಕೆಲಸವನ್ನು ತೇಜಸ್ವಿ ಅತ್ಯಂತ ಸೂಕ್ಷ್ಮವಾಗಿ, ಕಲಾತ್ಮಕವಾಗಿ, ವಿಶಿಷ್ಟವಾಗಿ ಸಮರ್ಥವಾಗಿ ಮಾಡಿದ್ದಾರೆ. ಬಹುಪಾಲು ಭಾರತೀಯರಂತೆ ತೇಜಸ್ವಿ ಪ್ರವಾಸ ಕೈಗೊಂಡಿದ್ದು, ಪುಣ್ಯ ಸಂಪಾದನೆಗಾಗಲ್ಲ ಕಾರಂತರಂತೆ ಅವರು ನಿಸರ್ಗ ಪ್ರಿಯರು, ತಮ್ಮ ಸುತ್ತಲ ಪ್ರಕೃತಿಯ ರಹಸ್ಯವನ್ನು ಕುತೂಹಲದ ಕಣ್ಣಿನಿಂದ ವೀಕ್ಷಿಸಿ, ತಾವು ಕಂಡ ಸತ್ಯವನ್ನು ತಮ್ಮ ಸಹಜವಾದ ಹಾಸ್ಯ, ವ್ಯಂಗ್ಯದ ಮೂಲಕ ಅನ್ವೇಷಣೆ ಮಾಡುತ್ತಾರೆ. ವಿಶ್ವದ ಅದ್ಭುತಗಳನ್ನು ತಮ್ಮ ಮೊನಚಾದ ಶೈಲಿಯಲ್ಲಿ ಹಾಸ್ಯಮಯವಾಗಿ ಚಿತ್ರಿಸುತ್ತಾರೆ. ಕಾರಂತರಂತೆ ಸಾಹಿತ್ಯೇತರ ಪ್ರಕಾರಗಳಲ್ಲಿಯೂ ಕುತೂಹಲ ಆಸಕ್ತಿ ಹುಟ್ಟಿಸುವಂತೆ ಬರೆಯಬಲ್ಲವರು ತೇಜಸ್ವಿ ಮಾತ್ರ ಎನ್ನಬಹುದು.

"ಸಾಹಿತ್ಯ–ಸಾಹಿತ್ಯೇತರ, ಸೃಜನ–ಸೃಜನೇತರ, ಸಾಹಿತ್ಯ–ಮಿಮರ್ಶೆ ಕಥೆ, ಪ್ರಬಂಧ,

ಕಾವ್ಯ, ಶಾಸ್ತ್ರ ಎಂಬೆಲ್ಲ ವಿಭಜನೆಗಳನ್ನು ದಾಟಿ ತೇಜಸ್ವಿ ಮುಂದುವರೆದಿದ್ದಾರೆ. ಶಿಕ್ಷಣ, ಮನರಂಜನೆ, ಗಂಭೀರ, ಜನಪ್ರಿಯ ಎಂಬಂಥ ದ್ವಿದಳ ವಿಭಜನೆಯನ್ನು ಮೀರಿದ ಹದವೊಂದನ್ನು ಸಾಧಿಸಿ ಶಿವರಾಮಕಾರಂತರ ಬರವಣಿಗೆಯ ಮಾದರಿ ಧಾಟಿಯನ್ನು ಮೀರಿ ಮುಂದೆ ಬಂದಿದ್ದಾರೆ, ಎಂದು ತೇಜಸ್ವಿ ಬರವಣಿಗೆಯ ಬಗ್ಗೆ ವಿಮರ್ಶಕ ಟಿ.ಪಿ.ಅಶೋಕ ಒಂದು ಕಡೆ ಹೇಳಿದ್ದರೆ, ಕಾರಂತರು ಹೇಳಿ ಕೇಳಿ ನಾಡೋಜರು, ಜಗತ್ತಿನ ಜ್ಞಾನ ಸಂಪತ್ತನ್ನು ಕನ್ನಡದ ಮಕ್ಕಳಿಗೆ ಬೇರೆ ಬೇರೆ ಪ್ರಕಾರಗಳಲ್ಲಿ ನೀಡಲು ನಿರಂತರವಾಗಿ ದುಡಿದವರು, ಕಲೆ, ಚಿತ್ರಕಲೆ, ಪಕ್ಷಿ – ಕೋಶಗಳು ಮುಂತಾದ ಜ್ಞಾನ ದಿಕ್ಕುಗಳನ್ನು ಪರಿಚಯಿಸಿದವರು. ಈ ಕೆಲಸವನ್ನು ಅವರಿಗಿಂತ ಅಚ್ಚುಕಟ್ಟಾಗಿ, ವೈಜ್ಞಾನಿಕವಾಗಿ ತೇಜಸ್ವಿ ಮಾಡಿದರು. ಕಾರಂತರು ಕಲಿತು ಮಾಡಿದ ಕೆಲಸವನ್ನು ತೇಜಸ್ವಿ ಅನುಭವದ ಮೂಲಕ ಗ್ರಹಿಸಿ ಮಾಡಿದರು. ಅದಕ್ಕೆ ಅವರ 'ಕನ್ನಡ ನಾಡಿನ ಹಕ್ಕಿಗಳು' ಮತ್ತು ಹಕ್ಕಿ ಪುಕ್ಕಗಳೇ ಸಾಕ್ಷಿ", ಎಂದು ಮತ್ತೊಬ್ಬ ವಿಮರ್ಶಕ ಶಿವರಾಮು ಕಾಡನಕುಪ್ಪೆ ಹೇಳಿದ್ದಾರೆ. ನಿಜಕ್ಕೂ ಈ ಮಾತು ಅಕ್ಷರಶಃ ಸತ್ಯ, ಏಕೆಂದರೆ ತೇಜಸ್ವಿಯವರ ಬದುಕು ಬರಹ ಹಾಗೆಯೇ ಇತ್ತು"[7].

ಕಾರಂತರ ವೈಚಾರಿಕ ಪ್ರಜ್ಞೆ ಬಹಳ ಜಾಗೃತವಾಗಿದೆ. ಆದ್ದರಿಂದ ಕಾರಂತರಿಗೆ ಇಡೀ ಕಾಡು, ಬೆಟ್ಟ, ಗುಡ್ಡ ಎಲ್ಲಾ ಹೇಗೆ ಕಾಣಿಸುತ್ತದೆ ಎಂದರೆ ಒಂದು ವಿಕಾಸದ ವೈಜ್ಞಾನಿಕ ದೃಷ್ಟಿಕೋನದ ವಿಶ್ಲೇಷಣಾತ್ಮಕವಾದ ರೂಪವಾಗಿ ಕಾಣಿಸುತ್ತದೆಯಾದ್ದರಿಮದ ಅಲ್ಲಿ ನಿಸರ್ಗ ಮತ್ತು ಮನುಷ್ಯನಿಗಿರುವ ಸಂಬಂಧ ಯಾವುದೆಂದರೆ ನಿರಂತರವಾದ ಹೋರಾಟ, ಅದನ್ನು ಅವರ "ಚೋಮನದುಡಿ', 'ಬೆಟ್ಟದ ಜೀವ', 'ಕುಡಿಯರ ಕೂಸು', 'ಚಿಗುರಿನ ಕನಸಿನಲ್ಲಿ' ಕಾಣಬಹುದು. ಅದನ್ನೇ ನಾವು ತೇಜಸ್ವಿಯವರ ಕಿರಗೂರಿನ ಗಯ್ಯಾಳಿಗಳು, ಅವನತಿ, ಚಿದಂಬರ ರಹಸ್ಯ, ಜುಗಾರಿಕ್ರಾಸ್‌ನಲ್ಲಿ ಗುರುತಿಸಬಹುದು.

ಕಾರಂತರು ತಮ್ಮ ಕಾದಂಬರಿಗಳ ಮೂಲಕ ಮನುಷ್ಯ ನಡೆಸುವ ಹೋರಾಟಗಳನ್ನು ಚಿತ್ರಿಸುತ್ತಾರೆ. ಆದರೆ ಅದರ ದಿಗ್ಭ್ರಮೆಗಳನ್ನು ಅದರ ನಿರಂತರ ನಿಗೂಢತೆ, ಏಕಾಂತತೆಯನ್ನು ಅದರೊಳಗಡೆ ಅಡಗಿರುವ ಕ್ರೌರ್ಯ, ಬೆರಗು, ವಿರಾಟ್ ಸ್ವರೂಪಗಳನ್ನು ಕಾರಂತರಲ್ಲಿ ಕಾಣಬಹುದಾಗಿದೆ. ಆದುದರಿಂದ ಕಾರಂತರಿಗಿಂತ ಒಂದು ಭಿನ್ನವಾದ ರೂಪವನ್ನು ತೇಜಸ್ವಿ ಪ್ರಕೃತಿಯಲ್ಲಿ ತೆಗೆದುಕೊಂಡಿದ್ದಾರೆ.

ತೇಜಸ್ವಿಯನ್ನು ಒಬ್ಬ ವಿಜ್ಞಾನಿಯಾಗಿ ನೋಡಬಾರದು. ತೇಜಸ್ವಿ ವಿಜ್ಞಾನಿಯೂ ಅಲ್ಲ, ಪರಿಸರ ವಿಜ್ಞಾನಿಯೂ ಅಲ್ಲ, ಪರಿಸರದ ಬಗೆಗೆ ಕಾಳಜಿ ಇಟ್ಟುಕೊಂಡಿದ್ದವರಷ್ಟೇ ಅದಕ್ಕೆ ಸಂಬಂಧಿಸಿದಂತೆ ವಿಜ್ಞಾನ ಸಾಹಿತ್ಯವನ್ನು ಓದಿಕೊಂಡಿದ್ದಾರೆ. ಅದೇ ರೀತಿ

ಕಾರಂತರು ಸಹ ವಿಜ್ಞಾನವನ್ನು ಹೆಚ್ಚಾಗಿ ಓದಿದವರಲ್ಲ. ಕೇವಲ ಆಸಕ್ತಿಯ ಫಲವಾಗಿ ಓದಿಕೊಂಡಿದ್ದನ್ನು ಕನ್ನಡದಲ್ಲಿ ಕಟ್ಟಿಕೊಡಲು ಪ್ರಯತ್ನಿಸಿದರು.

ಕಾರಂತರಿಗೆ ವಿಜ್ಞಾನದ ಗ್ರಹಿಕೆ ಅವರ ಬಾಳಿನ ಬೆಳಕಿನ ಭಾಗವಾಗಿ ಬಂದರೆ, ವೈಜ್ಞಾನಿಕ ಬ್ರಹ್ಮಾಂಡ ಸತ್ಯದ ಭಾಗವಾಗಿ ಕಾರಂತರಿಗೆ ಅವರ ಗ್ರಹಿಕೆಯ ತಾರ್ಕಿಕ ಸತ್ಯ ಹೊಂದಾಣಿಕೆಯಾಗಬೇಕು. ವಿಜ್ಞಾನ ಅವರಿಗೆ ವಿಸ್ಮಯ ಅಲ್ಲ. ಅದು ಅವರಿಗೊಂದು ನಿರಂತರ ಕುತೂಹಲ, ತಾರ್ಕಿಕ ಪ್ರವೃತ್ತಿಯ ಚಿಂತನಾಗತಿ.

ಆದರೆ ತೇಜಸ್ವಿಯವರಿಗೆ ವಿಜ್ಞಾನವು ಒಂದು ವಿಸ್ಮಯವೇ, ತಾರ್ಕಿಕತೆಗೆ ಮೀರಿದ ಒಂದು ನಿಗೂಢದ ಭಾಗದಂತೆ ಅವರು ಇಂತಹ ಮಾಹಿತಿಯ ವಿವರಗಳಲ್ಲಿ ತಲ್ಲೀನರಾಗುತ್ತಾರೆ.

ತೇಜಸ್ವಿ ಮನುಷ್ಯನನ್ನು ಈ ಸಮಸ್ತದ ಭಾಗವಾಗಿ ಗಮನಿಸುತ್ತಾರೆಯೇ ಹೊರತು ಈ ಭೂಮಂಡಲದ ಅಧಿಪತಿಯಾಗಿ ಒಪ್ಪಿಕೊಳ್ಳುವುದಿಲ್ಲ. ಕನ್ನಡದಲ್ಲಿ ಈ ಚಿಂತನೆಗೆ ಒಂದು ಹಿನ್ನಲೆಯೂ ಇದೆ. ಕಾರಂತ ಹಾಗೂ ಕುವೆಂಪು ಅವರ ಕಾದಂಬರಿಗಳಲ್ಲಿ ಈ ಚಿಂತನೆಗೆ ಒಂದು ಹಿನ್ನೆಲೆಯೂ ಇದೆ. ಕಾರಂತ ಹಾಗೂ ಕುವೆಂಪು ಅವರ ಕಾದಂಬರಿಗಳಲ್ಲಿ ಕಾಡು ಅತ್ಯಂತ ಜೀವಂತವಾಗಿ ಚಿತ್ರಿಸಲ್ಪಟ್ಟಿದೆ. ತೇಜಸ್ವಿ ಆ ಬಳಿಕ ತಮ್ಮ ಸಾಹಿತ್ಯ ಕೃತಿಗಳಲ್ಲಿ ಕಾಡಿನ ಲೋಕದ ಮೂಲಕ ಮನುಷ್ಯ ಲೋಕವನ್ನು ತೋರಿಸಿಕೊಟ್ಟವರು, ಕಾಡಿನ ಮೂಲಕವೇ ತಮ್ಮ ಪರಿಸರದ ದರ್ಶನದ ಮೌಲ್ಯಗಳನ್ನು ಸ್ಥಾಪಿಸಿದರು.

"ಕಾರಂತರು ತೇಜಸ್ವಿ ಕುರಿತು – ನಾನು ವಿಜ್ಞಾನ ಕುರಿತು ಬರೆದೆ, ಆದರೆ ನಿನ್ನ ರೀತಿ ಅನುಭವಿಸಿ ಬರೆಯಲು ಸಾಧ್ಯವಾಗಲೇ ಇಲ್ಲ. ನೀನು ಅನುಭವಿಸಿ ಬರೆಯುತ್ತಿದ್ದೀಯಾ, ತೇಜಸ್ವಿ ನೀನು ಕಾರಂತರ ಮುಂದುವರೆದ ಭಾಗ ಎಂದಿದ್ದರು"[8]

" ತೇಜಸ್ವಿ ಮತ್ತು ಕಾರಂತರಿಗೆ ಇದ್ದ ವ್ಯತ್ಯಾಸವೆಂದರೆ, ವಿಜ್ಞಾನದಂತಹ ನಿರ್ಜೀವ ಸಂಗತಿಗಳನ್ನು ಕೂಡ ರಸವತ್ತಾಗಿ ಓದುಗರಿಗೆ ವಿವರಿಸುವ ಕಲೆ ಕಾರಂತರಿಗೆ ಬಂದಿರಲಿಲ್ಲ. ಅದು ತೇಜಸ್ವಿಗೆ ಬಲಿದಿತ್ತು. ಏನನ್ನಾದರೂ ಸರಿ ತುಂಬ ಸರಳವಾಗಿ, ರುಚಿಕಟ್ಟಾಗಿ, ಸಾಮಾನ್ಯರಿಗೆ ಅರ್ಥವಾಗುವಂತೆ ಹೇಳಬೇಕು ಎಂಬ ತತ್ವ ಅವರದ್ದು"[9].

ಪ್ರವಾಸ ಕುರಿತು ತೇಜಸ್ವಿಯವರ ಧೋರಣೆ ಸಂಪ್ರದಾಯ ವಿರುದ್ಧವಾದುದು, ಅವರಿಗೆ ಪವಿತ್ರ – ಪುಣ್ಯ ಕ್ಷೇತ್ರಗಳಿಗೆ ಹೋಗುವ ಮನಸ್ಸಿಲ್ಲ, ಶಿವರಾಮಕಾರಂತರಂತೆ, ಪ್ರವಾಸಕ್ಕೆ ಹೋದಾಗ ನೈಸರ್ಗಿಕ ಪರಿಸರಕ್ಕೆ ಮಹತ್ವ ಕೊಡುತ್ತಾರೆ. ಪ್ರಕೃತಿಯ ನಿಗೂಢ ರಹಸ್ಯವನ್ನು

ಕುತೂಹಲದ ಕಣ್ಣಿನಿಂದ ನೋಡುತ್ತಾರೆ. ಅದನ್ನೇ ತಮ್ಮ ಪ್ರವಾಸ ಕಥನ ಅಲೆಮಾರಿಯ ಅಂಡಮಾನ್ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ.

ಮೂಲತಃ ತೇಜಸ್ವಿಯವರಿಗೆ ಪ್ರವಾಸದಲ್ಲಿ ಇರುವ ಆಸಕ್ತಿ ವಿಭಿನ್ನ ಬಗೆಯದು, ಯಾರು ತಾವಿರುವಲ್ಲೇ ಸಂತೋಷ, ಉತ್ಸಾಹ, ಕುತೂಹಲಗಳನ್ನು ಕಾಣಲಾರರೋ ಅವರು ಅದನ್ನು ಹುಡುಕಿಕೊಂಡು ಪ್ರವಾಸ ಹೋಗುವುದು ವ್ಯರ್ಥ ಎನ್ನುವುದು ಅವರ ಅಭಿಪ್ರಾಯ, ಅವರು ಪ್ರವಾಸದಲ್ಲಿ ಕಂಡ ಅನುಭವವನ್ನು ತಮ್ಮ ಪ್ರವಾಸ ಕಥನದಲ್ಲಿ ಕಾರಂತರು ಚಿತ್ರಿಸಿದಂತೆಯೇ ಅಲೆಮಾರಿಯ ಅಂಡಮಾನ್‌ನಲ್ಲಿ ಚಿತ್ರಿಸಿದ್ದಾರೆ.

ತೇಜಸ್ವಿ ವಿಜ್ಞಾನದ ವಿಷಯಗಳನ್ನು ಅತ್ಯಂತ ಸರಳವಾಗಿ ಜನಸಾಮಾನ್ಯರೂ ಅರಿಯುವಂತೆ ನಿರೂಪಿಸುತ್ತಾರೆ. ಶಿವರಾಮ ಕಾರಂತರನ್ನು ಬಿಟ್ಟರೆ, ಕನ್ನಡದಲ್ಲಿ ತೇಜಸ್ವಿಯವರೊಬ್ಬರೇ ಪ್ರಮುಖ ಸಾಹಿತಿಯಾಗಿಯೂ ಸಾಹಿತ್ಯೇತರ ವಿಷಯಗಳ ಬಗ್ಗೆಯೂ ತೀವ್ರವಾದ ಆಸಕ್ತಿ ಇಟ್ಟುಕೊಂಡು ಕೃತಿ ರಚಿಸಿರುವಂಥವರು, ಕಾರಂತರ ಪ್ರಯೋಗಶೀಲತೆ, ಕುವೆಂಪು ಅವರ ಕಲಾಸೃಷ್ಟಿ, ಲೋಹಿಯಾ, ಅವರ ರಾಜಕೀಯ ವಿಚಾರಧಾರೆ ಮತ್ತು ಜೀವನದಲ್ಲಿಯ ಪ್ರಯೋಗಶೀಲತೆ ಇವುಗಳು ಅವರ ಬರವಣಿಗೆಯ ಹಿಂದಿರುವ ಪ್ರೇರಣೆಗಳು.

ತೇಜಸ್ವಿ ತಮ್ಮ ಪ್ರವಾಸದಲ್ಲಿ ಅನ್ವೇಷಣೆಯಿಂದ ತಾವು ಕಂಡಂತಹ ಸತ್ಯವನ್ನು ತಮ್ಮ ಬರಹಗಳಲ್ಲಿ ಅಪೂರ್ವವಾಗಿ ಚಿತ್ರಿಸುತ್ತಾರೆ. ವಿಶ್ವದ ಅದ್ಭುತವನ್ನು ತಮ್ಮ ಹಾಸ್ಯಮಯ ವ್ಯಂಗ ಶೈಲಿಯಲ್ಲಿ ವಿವರಿಸುವ ತೇಜಸ್ವಿ ಕಾರಂತರಂತೆ ಯಾವಾಗಲೂ ಜ್ಞಾನಾನ್ವೇಷಿಯಾಗಿ ಕಾಣುತ್ತಾರೆ.

ಒಟ್ಟಿನಲ್ಲಿ ನಾವು ಕುವೆಂಪು ಮತ್ತು ಕಾರಂತರನ್ನು ಒಟ್ಟಾಗಿ ಕಾಣಬೇಕಾದರೆ ನಾವು ತೇಜಸ್ವಿ ಅವರನ್ನು ನೋಡಬೇಕು. ಹೀಗೆ ನಾವು ಪ್ರಕೃತಿಯ ಚಿತ್ರಣದಲ್ಲಿ ತೇಜಸ್ವಿ ಮತ್ತು ಕಾರಂತರಿಗೆ ಇರುವ ವೈಶಿಷ್ಟತೆಯನ್ನು ಕಾಣಬಹುದು.

## ತೇಜಸ್ವಿ ಮತ್ತು ಜಿ.ಜೆ.ಎಲ್.ಸ್ವಾಮಿ

ತೇಜಸ್ವಿಯಂತೆಯೇ ಬಿ.ಜೆ.ಎಲ್.ಸ್ವಾಮಿ ಕೂಡ ಪ್ರಕೃತಿ ಮತ್ತು ವಿಜ್ಞಾನದಲ್ಲಿ ಆಸಕ್ತಿವುಳ್ಳವರಾಗಿದ್ದರು. ತೇಜಸ್ವಿ ಇಡೀ ಪರಿಸರವನ್ನು ಅಲ್ಲಿನ ಮಾನವ, ಧರ್ಮ, ವೈಚಾರಿಕತೆ, ವಿಜ್ಞಾನ, ಸಂಸ್ಕೃತಿ, ವೈಜ್ಞಾನಿಕತೆ, ತಾತ್ವಿಕತೆ ದೃಷ್ಟಿಯಿಂದ ನೋಡಿರುವುದನ್ನು ಕಾಣಬಹುದು. ಆದರೆ ಸ್ವಾಮಿಯವರು ಪ್ರಕೃತಿಯಲ್ಲಿನ ಸಸ್ಯಶಾಸ್ತ್ರ ಮತ್ತು ವಿಜ್ಞಾನದ

ವಸ್ತುವನ್ನು ಮುಖ್ಯವಾಗಿಟ್ಟುಕೊಂಡು ಹಲವಾರು ಉತ್ತಮ ಜನಪ್ರಿಯ ಕೃತಿಗಳನ್ನು ರಚಿಸಿದ್ದರು ಅವರಿಗೆ ಅಸಾಧಾರಣ ಕೀರ್ತಿಯನ್ನು ತಂದುಕೊಟ್ಟ ಕೃತಿ 'ಹಸುರು ಹೊನ್ನು', ಎಂದು ಹೇಳಬಹುದು. ಈ ಕೃತಿಯು ನಾಟಕವಲ್ಲ, ಕಥೆಯಲ್ಲಿ, ಪ್ರಬಂಧವಲ್ಲ, ಕಾದಂಬರಿಯಲ್ಲಿ, ಈ ಎಲ್ಲದರ ಅಂಶಗಳನ್ನು ಮೈಗೂಡಿಸಿಕೊಂಡ ಸಸ್ಯಯಾತ್ರೆಯ ಅನುಭವ ಕಥನ.

ತೇಜಸ್ವಿ ಹೇಗೆ ಪ್ರಕೃತಿಯಲ್ಲೇ ಇದ್ದು ಹತ್ತಿರದಿಂದ ನೋಡಿ ಅನುಭವಿಸಿ, ಸಾಹಿತ್ಯ ರಚನೆ ಮಾಡಿದ್ದಾರೋ ಹಾಗೇ ಇವರು ಕೂಡ ಪ್ರಕೃತಿಯನ್ನು ಅನುಭವಿಸಿ ಸಾಹಿತ್ಯ ರಚಿಸಿದ್ದಾರೆ. ತೇಜಸ್ವಿ ತಂದೆ ಕುವೆಂಪು ಹೇಗೆ ಒಬ್ಬ ಹೆಸರಾಂತ ಸಾಹಿತಿಯೋ, ಹಾಗೇ ಜಿ.ಜಿ.ಎಲ್.ಸ್ವಾಮಿಯವರ ತಂದೆ ಡಿ.ವಿ. ಗುಂಡಪ್ಪನವರು ಕನ್ನಡದ ಹೆಸರಾಂತ ಸಾಹಿತಿ ಎಂದು ಹೇಳಬಹುದು. ತೇಜಸ್ವಿ ಪ್ರಕೃತಿಯಲ್ಲಿನ ಮರ–ಗಿಡ, ಬೆಟ್ಟ–ಗುಡ್ಡ, ಪ್ರಾಣಿ–ಪಕ್ಷಿ ಇವುಗಳ ಜೊತೆಗೆ ಪ್ರಕೃತಿ–ಮಾನವ ಸಂಬಂಧ ನಾಗರಿಕತೆಯ ಪರಿಣಾಮಗಳು ವೈಚಾರಿಕತೆ, ವೈಜ್ಞಾನಿಕತೆ, ಜಾಗತೀಕರಣ, ಪ್ರಭಾವ, ಸಾಮಾಜಿಕ, ಆರ್ಥಿಕ, ಸಾಂಸ್ಕೃತಿಕ ಜೀವನವನ್ನು ನಮ್ಮ ಮುಂದೆ ತೆರೆದಿಟ್ಟರೆ, ಸ್ವಾಮಿಯವರು ಕಾಡುವಾಸಿಗಳ ಬದುಕಿನ ಪರಿಚಯ, ಸಂಶೋಧನೆ ವಿಧಾನಗಳು,ಸಂಘಟನಾ ಚಾತುರ್ಯ ಮೊದಲಾದ ಅಂಶಗಳನ್ನು ಅವರ ಕೃತಿಯಲ್ಲಿ ಕಾಣಬಹುದು.

"ತೇಜಸ್ವಿಯಂತೆ ಸ್ವಾಮಿಯವರು ಮಾನವ ಸ್ವಭಾವದ ಅಂಕು – ಡೊಂಕುಗಳನ್ನು ತಮ್ಮ ಕೃತಿಯಲ್ಲಿ ಕಟ್ಟಿಕೊಟ್ಟಿದ್ದಾರೆ. ಜೊತೆಗೆ ಮಾನವ ಜೀವನದೊಂದಿಗೆ ವಿಜ್ಞಾನ ವಿಚಾರಗಳನ್ನು ಇಬ್ಬರೂ ಕೂಡ ನೀರಸವಾಗದಂತೆ ಓದುಗರಿಗೆ ಕಟ್ಟಿಕೊಡುತ್ತಾರೆ. ಇಬ್ಬರೂ ಕೂಡ ತಮ್ಮ ಕಥಾ ಸಾಹಿತ್ಯದಲ್ಲಿ ಹಾಸ್ಯಪ್ರಜ್ಞೆಯನ್ನು ಬಳಸಿದ್ದಾರೆ. ತೇಜಸ್ವಿ ಸಾಹಿತ್ಯದಲ್ಲಿ ಬರುವ ಮಂದಣ್ಣ, ಬಿರ್ಯಾನಿ ಕರಿಯಪ್ಪ, ಕಿರಗೂರಿನ ಮಹಿಳೆಯರು, ಕಿವಿ, ಪ್ಯಾರಾ ಇವರುಗಳ ಮೂಲಕ ಹಾಸ್ಯ ಪ್ರಕಟಿಸಿದ್ದಾರೋ ಹಾಗೇ ಸ್ವಾಮಿಯವರ ಹಸುರು ಹೊನ್ನು ಕೃತಿಯಲ್ಲಿ ಅವರು ತಾವು ಕೈಗೊಂಡ ಯಾತ್ರೆಯಲ್ಲಿ ಹೆಜ್ಜೆ ಹೆಜ್ಜೆಗೂ ಸಂಭವಿಸಿದ ಕಷ್ಟಪರಂಪರಯನ್ನು ಹಾಸ್ಯದಿಂದ ಎದುರಿಸಿರುವುದನ್ನು ಕಟ್ಟಿಕೊಟ್ಟಿದ್ದಾರೆ".[10]

ತೇಜಸ್ವಿ ಕರ್ವಾಲೊ ಕಾದಂಬರಿಯಲ್ಲಿ ಹಾರುವ ಓತಿಯನ್ನು ಹುಡುಕಲು ಮಂದಣ್ಣ, ಕರ್ವಾಲೋ, ಬಿರಿಯಾನಿ, ಕರಿಯಪ್ಪ, ಕಿವಿ, ಹಾವುಗೊಲ್ಲರ ಎಂಕ್ಟ ಮೊದಲಾದವರು ಕಾಡಿಗೆ ಪ್ರವಾಸ ಕೈಗೊಳ್ಳುವುದನ್ನು ಕಾಣಬಹುದು. ಅದೇ ರೀತಿ ಸ್ವಾಮಿಯವರು ಕೂಡ ಮಾತನ್ನು ಮೂದಲಿಸುವ ಮಹಾರಣ್ಯ, ಸರಣಿ ಕಾಡುಗಳ ವೀಕ್ಷಣೆ, ಕೇರಳದ ತೇಕ್ಕಡಿ

ಕಾಡುಗಳ ಭೇಟಿ, ಪ್ರಕೃತಿಯ ನರ್ತನ ರಂಗವೇ ಆಗಿರುವ ಆಗುಂಬೆಯ ಅರಣ್ಯದರ್ಶನ ಹಸಿರು ಕಡಲ ಕನ್ಯಾಕುಮಾರಿ ಹಾಗೂ ಕೇರಳದ ಕಡಲ ತೀರದ ಕಾಡುಗಳ ಅಧ್ಯಯನ ಹೀಗೆ ದಕ್ಷಿಣಭಾರತದ ಕಾಡುಗಳ ಸಸ್ಯವೈವಿಧ್ಯ, ಪ್ರಾದೇಶಿಕ ಭಿನ್ನತೆಗಳು, ಜನರ ರೀತಿ-ನೀತಿಗಳನ್ನು ಹಸಿರುಹೊನ್ನುವಿನಲ್ಲಿ ಗುರುತಿಸಬಹುದು.

ತೇಜಸ್ವಿ, ಕೃಷ್ಣೇಗೌಡನ ಆನೆ, ಕಥೆಯಲ್ಲಿ ಮಾನವ ಮತ್ತು ಪ್ರಾಣಿಸಂಬಂಧವನ್ನು ಕಟ್ಟಿಕೊಡುವಂತೆ ಸ್ವಾಮಿ ಹಸಿರುಹೊನ್ನು ಕೃತಿಯಲ್ಲಿ ಸಸ್ಯಯಾತ್ರೆಯ ಜೊತೆಗೆ ಅಲ್ಲಿನ ಪ್ರಾಣಿಪ್ರಪಂಚವನ್ನು ಪರಿಚಯಿಸುತ್ತಾರೆ.

ತೇಜಸ್ವಿ ಹೇಗೆ ನಮಗೆ ಗೊತ್ತಿಲ್ಲದ ಹಲವಾರು ಪ್ರಾಣಿ, ಪಕ್ಷಿ, ಸಸ್ಯಗಳನ್ನು ಪರಿಚಯಿಸುತ್ತಾರೋ ಹಾಗೇ ಸ್ವಾಮಿ ಕೂಡ ಪ್ರಾಣಿ, ಸಸ್ಯಗಳ ಬಗ್ಗೆ ಮಾಹಿತಿ ನೀಡುತ್ತಾರೆ. ಕರ್ವಾಲೋದಲ್ಲಿ ಮಂದಣ್ಣ ಮತ್ತು ಬಿರ್ಯಾನಿ ಕರಿಯಪ್ಪರಿಗೆ ಕಾಡು ಹೇಗೆ ಪರಿಚಯವಾಗಿತ್ತು. ಜೊತೆಗೆ ಅವರು ತಮ್ಮ ಕಣ್ಣು, ಕಿವಿ, ಮೂಗುಗಳ ಸಹಾಯದಿಂದ ಅವರು ಹೇಗೆ ಇಂತಹ ಸ್ಥಳದಲ್ಲಿ ಇಂತಹ ವಸ್ತುವೇ ಇತ್ತು ಎಂಬುದನ್ನು ಗುರುತಿಸಬಲ್ಲವರಾಗಿದ್ದರು. ಉದಾ:- ಮಂದಣ್ಣ ಜೇನಿನ ಶಬ್ದವನ್ನು ಕೇಳಿ ಇಂತಹ ಸ್ಥಳದಲ್ಲೇ ಇದೆ ಎಂದು ಪತ್ತೇ ಮಾಡಿ ಅದನ್ನು ಕ್ಷಣಾರ್ಧದಲ್ಲೇ ಹುಡುಕಿ ಅದು ಇಂತಹದೇ ಜಾತಿಗೆ ಸೇರಿದ ಜೇನು ಎಂದು ಸಹ ಹೇಳುತ್ತಿದ್ದುದನ್ನು ಕಾಣಬಹುದು. ಹಾಗೇ ಸ್ವಾಮಿಯವರು ತಾವು ಅರಣ್ಯದಲ್ಲಿ ಸರಿಯಾದ ಮಾರ್ಗವನ್ನು ತಿಳಿಯಲು ಒಬ್ಬ ವ್ಯಕ್ತಿಯನ್ನು ನೇಮಿಸಿಕೊಂಡಿದ್ದರು. ಅವನೇ ವೆಲ್ಲತ್ತಪಿಳ್ಳೆ ಅವನು ಅರಣ್ಯವಾಸಿಯಾಗಿದ್ದು, ಹೇಗೆ ಅವರ ಕಣ್ಣು, ಕಿವಿ, ಮೂಗು, ಎಷ್ಟು ಸೂಕ್ಷ್ಮವಾದವು ಎಂದರೆ ಅರಣ್ಯದಲ್ಲಿ ಹೋಗುತ್ತಿದ್ದಾಗ ಅವನು ಇದ್ದಕ್ಕಿದ್ದಂತೆಯೇ ನಿಂತು ಕಿವಿಗಳನ್ನು ಮಾತ್ರ ಅಲುಗಿಸುತ್ತಾನೆ. ಆಗ ಅದೇನೋ ಕೇಳಿಸುತ್ತದೆ. ಚಂಗನೆ ಹಾರಿ, ಗಿಡಗಳ ನಡುವೆ ಮರೆಯಾಗಿ, ಪೊದೆಗಳ ಕೆಳಗೆ ನುಸುಳುತ್ತಾನೆ. ಆಗ ಅಲ್ಲಿ ಲೇಖಕರಿಗೆ ಆಶ್ಚರ್ಯವಾಗುತ್ತದೆ. ವೆಲ್ಲತ್ತಪಿಳ್ಳೆ ಜೊತೆ ಅವರು ನುಸುಳಿದಾಗ ಅಲ್ಲಿ ಜೇನಿರುವುದು ತಿಳಿಯುತ್ತದೆ.

ತೇಜಸ್ವಿ ಸಾಹಿತ್ಯದಲ್ಲಿ ಮಲೆನಾಡಿನ ಜನರ ಜೀವನವೇ ಮುಖ್ಯವಾದರೆ, ಸ್ವಾಮಿಗೆ ಗಿಡಮೂಲಿಕೆಗಳ ಜ್ಞಾನವಿತ್ತು. ಅವರು ತಮ್ಮ ಕೃತಿಯಲ್ಲಿ ಮಲೆನಾಡಿನ ಮಳೆಗಾಲದ ವೈಭವವನ್ನು ಮಾತ್ರ ಆಕರ್ಷಣೀಯವಾಗಿ ಚಿತ್ರಿಸಿದ್ದಾರೆಯೇ ವಿನ: ಅಲ್ಲಿಯ ಜನರ ಜೀವನವನ್ನಲ್ಲ ಮಳೆ ಬರುವ ಮುನ್ನ ಪ್ರಕೃತಿಯಲ್ಲಾಗುವ ಬದಲಾವಣೆಗಳನ್ನು ಕಣ್ಣಿಗೆ

ಕಟ್ಟುವಂತೆ ವಿವರಿಸಿದ್ದಾರೆ.

ತೇಜಸ್ವಿಯಂತೆ ಸ್ವಾಮಿಯವರು ಕೂಡ ಬುದ್ಧಿಜೀವಿಯ ವರ್ಚಸ್ಸನ್ನು ತತ್ವಜ್ಞಾನಿಯ ಮನಸ್ಸನ್ನು ಹೊಂದಿದ ವಿಜ್ಞಾನಿಯಾಗಿಒದ್ದರು. ಇಬ್ಬರ ಕೇಂದ್ರ ವಸ್ತು ಪ್ರಕೃತಿಯೇ ಆಗಿದ್ದರೂ ಸಹ ಅದನ್ನು ಭಿನ್ನ ರೀತಿಯಲ್ಲಿ ಬಳಸಿಕೊಂಡಿದ್ದಾರೆ ಎಂದು ಹೇಳಬಹುದು. ಇಬ್ಬರಿಗೂ ಸಹ ವಿಜ್ಞಾನದಲ್ಲಿ ತುಂಬಾ ಆಸಕ್ತಿ ಇತ್ತು. ಹೀಗೆ ತೇಜಸ್ವಿ ಮತ್ತು ಬಿ.ಜೆ.ಎಲ್.ಸ್ವಾಮಿಗೆ ಇರುವ ಭಿನ್ನತೆಯನ್ನು ಕಾಣಬಹುದಾಗಿದೆ.

ಹೀಗೆ ನಾವು ಪ್ರಕೃತಿ ಚಿತ್ರಣದಲ್ಲಿ ತೇಜಸ್ವಿ ತಮ್ಮದೇ ಆದ ವೈಶಿಷ್ಟತೆಯನ್ನು ಮರೆದಿರುವುದನ್ನು ಹಿರಿಯ ಮತ್ತು ಸಮಕಾಲೀನ ಲೇಖಕರೊಡನೆ ತೌಲನಿಕವಾಗಿ ಅಧ್ಯಯನ ಮಾಡಬಹುದಾಗಿದೆ. ಒಟ್ಟಿನಲ್ಲಿ ತೇಜಸ್ವಿ ಬದಲಾವಣೆಯ ಮಹಾಪೂರದ ಎದುರು ತಬ್ಬಲಿಯಾಗಿ ನಿಂತ ಮಾನವನ ಪಾಡು ಅವರಿಗೆ ಕಥಾವಸ್ತುವಾಗಿತ್ತು. ನಮ್ಮ ಕನ್ನಡ ಸಾಹಿತ್ಯದಲ್ಲಿ ಕಾಡು ಮೂರು ರೀತಿಯಲ್ಲಿ ವ್ಯಕ್ತವಾಗಿದೆ. ಅದು ಕುವೆಂಪುರವರಲ್ಲಿ ಅವರು ಕಂಡ ದಟ್ಟ ಕಾಡು, ಕಾರಂತರು ಕಂಡ ಮಾನವನ ಅಭಿವೃದ್ಧಿಗೆ ಸವಾಲಾದ ಕಾಡು. ತೇಜಸ್ವಿ ಕಾಡುತ್ತಿರುವ ಕ್ರಮೇಣ ಮರೆಯಾಗುತ್ತಿರುವ ಕಾಡು.

ತೇಜಸ್ವಿಯರ ಕಾಲಕ್ಕೆ ಬೋಳು ಬಯಲು ಈ ದುರಂತವನ್ನೇ ಅವರು ಹೇಳಿದ್ದು, ಚಿದಂಬರ ರಹಸ್ಯ, ಕರ್ವಾಲೊದಲ್ಲಿ ಆಗಲಿ ಅವರ ಕಾಳಜಿ ಅದೊಂದೆ ಆಗಿತ್ತು.

******

---

1. ತೇಜಸ್ವಿ ಸಾಹಿತ್ಯ ಕೃಷಿ : ಸಂ–ಬಿ.ಟಿ.ವೀರಪ್ಪ ಮತ್ತು ಎಂ.ಬೈರೇಗೌಡ– ಪುಟ 122.
2. ತೇಜಸ್ವಿ ಸಾಹಿತ್ಯ ಕೃಷಿ : ಬಿ.ಟಿ.ವೀರಪ್ಪ ಮತ್ತು ಎಂ.ಬೈರೇಗೌಡ– ಪುಟ–84
3. ಪತ್ರಿಕಾ ಲೇಖನ : ಡಾ॥ ಚಂದ್ರಶೇಖರ ಕಂಬಾರ
4. ತೇಜಸ್ವಿ ಲೋಕ : ಸಂ.ಡಿ. ಪ್ರಹ್ಲಾದ್ – 2007
5. ತೇಜಸ್ವಿ –ಎಂ.ಬೈರೇಗೌಡ, ಬಿ.ಆರ್.ಸತ್ಯನಾರಾಯಣ 2006 ಪುಟ 69.
6. ತೇಜಸ್ವಿ ನೆನಪು : ಸಂ.ಡಿ. ಪ್ರಹ್ಲಾದ್– ಪುಟ 54
7. ಬನ್ನೂರು ಕೆ.ರಾಜು– "ಕನ್ನಡ ಸಾರಸ್ವತ ಲೋಕದ ಪೂರ್ಣಚಂದ್ರ ' ಕನ್ನಡ ಪ್ರಭಾ 5/4/2009
8. ತೇಜಸ್ವಿ ನೆನಪು– ಸಂ.ಬಿ.ಚಂದ್ರೇಗೌಡ, ಬಿ.ಎಲ್.ರಾಜು–ಪುಟ – 51
9. ತೇಜಸ್ವಿ ನೆನಪು : ಸರಿ .ಬಿ.ಚಂದ್ರೇಗೌಡ, ಬಿ.ಎಲ್.ರಾಜು–ಪುಟ – 61
10. ಜಿ.ಜೆ.ಎಲ್.ಸ್ವಾಮಿ ಡಾ॥ ಮುಳುಕುಂಟೆ ರಮೇಶ್, : ಸಂಪಾದಕ : ಪ್ರಧಾನ ಗುರುದತ್ತ -ಪುಟ 104.

# ಉಪಸಂಹಾರ :

ತೇಜಸ್ವಿ ಕನ್ನಡ ಸಾಹಿತ್ಯಲೋಕ ಕಂಡ ವಿಶೇಷ ಬರಹಗಾರ ಜಾತಿ, ಧರ್ಮಕ್ಕೆ ಅತೀತರಾಗಿ ಬದುಕಿನ ವಾಸ್ತವತೆಗಳನ್ನು ತಮ್ಮ ಬರಹಗಳಲ್ಲಿ ಮಾತ್ರವಲ್ಲದೇ ಸಾಮಾಜಿಕ ಜೀವನದಲ್ಲೂ ಬದಲಾವಣೆಯ ದೃಷ್ಟಿಯಿಂದ ನೋಡಿದ ವಿಶಿಷ್ಟ ಮನಸ್ಥಿತಿ ಉಳ್ಳವರು. ಯಾವುದೇ ತಂತ್ರಜ್ಞಾನ ಅಭಿವೃದ್ಧಿಯಾಗಲೀ ಅದನ್ನು ಅಳವಡಿಸಿಕೊಂಡ ಅಪರೂಪದ ಸಾಹಿತಿ, ನವ್ಯ-ನವೋತ್ತರ ಕಾಲಘಟ್ಟಗಳ ನಡುವೆ ತಮ್ಮದೇ ವಿಶಿಷ್ಟ ಅಭಿವ್ಯಕ್ತಿ ಮಾರ್ಗಗಳನ್ನು ರೂಪಸಿಕೊಂಡವರು.

ತೇಜಸ್ವಿ ಅವರು ಕಥೆ, ಕಾದಂಬರಿ, ಕಾವ್ಯ, ನಾಟಕ, ಪ್ರವಾಸ ಕಥನ, ಅನುವಾದ ಇವುಗಳಲೆಲ್ಲಾ ಪ್ರಾಣಿ-ಪಕ್ಷಿ ಕುರಿತು ತಮ್ಮದೇ ಆದ ವೈಶಿಷ್ಟ್ಯತೆ ಮೆರೆದಿದ್ದಾರೆ. ಗಿಡ-ಮರ, ಹಕ್ಕಿ-ಪಕ್ಷಿ, ಹೂವು-ಹಣ್ಣು, ಮಣ್ಣು-ನೀರು, ಇಳೆ-ಬೆಳೆ, ಕಾಡು-ಮೇಡು ಎಂದು ಸದಾ ನಿಸರ್ಗದಲ್ಲೇ ಸ್ವರ್ಗ ಕಾಣುತ್ತಿದ್ದ ತೇಜಸ್ವಿ ಜನಾರಣ್ಯದಿಮದ ದೂರವಿದ್ದು ಒಂದು ರೀತಿಯ ಮಲೆನಾಡಿನ ಸಂತನಂತೆ ಬದುಕಿದವರು, ಕಾಡಿನ ಬದುಕಿನಲ್ಲೂ ನಾಡಿನ ಹಿತವೇ ಮುಖ್ಯವಾಗಿತ್ತು. ಅದನ್ನು ನಾವು ಅವರ ಕಥಾ ಸಾಹಿತ್ಯದಲ್ಲಿ ಸಾಮಾಜಿಕವಾಗಿ, ಆರ್ಥಿಕವಾಗಿ, ರಾಜಕೀಯವಾಗಿ, ವೈಜ್ಞಾನಿಕವಾಗಿ, ವೈಚಾರಿಕವಾಗಿ, ತಾತ್ವಿಕವಾಗಿ, ಧಾರ್ಮಿಕವಾಗಿ ಹೇಗೆ ಚಿಂತಿಸಿದ್ದಾರೆ ಎಂಬುದರ ಮೂಲಕ ತಿಳಿಯುತ್ತೇವೆ.

ತೇಜಸ್ವಿ ತಮ್ಮ ಕಥೆ ಕಾದಂಬರಿಗಳಲ್ಲಿ ಆಧುನಿಕತೆ ಸಾಮಾಜಿಕ ಬದುಕಿನಲ್ಲಿ ತಂದೊಡ್ಡುವ ಸಮಸ್ಯೆಗಳು, ಅದರಿಂದ ಬಿಡುಗಡೆ ಹೊಂದಲು ಹೆಣಗುವ ರೀತಿ ನಂತರ ಆ ಸಮಾಜ ಆಧುನಿಕತೆಯಿಂದ ಹೇಗೆ ಅವನತಿ ಹೊಂದುವುದು ಎಂಬ ಕಠೋರ ವಾಸ್ತವವನ್ನು ಸಮರ್ಥವಾಗಿ ಗುರುತಿಸಿದ್ದಾರೆ. ತಮ್ಮ ಸಾಹಿತ್ಯದಲ್ಲಿ ಭಾಷೆ, ಪರಿಸರ ಸಂಸ್ಕೃತಿ, ದರ್ಶನ, ವಿಜ್ಞಾನ, ತಂತ್ರಜ್ಞಾನ, ಎಲ್ಲಕ್ಕಿಂತ ಹೆಚ್ಚಾಗಿ ಕೃಷಿ ಪದ್ದತಿಯ ಬಗ್ಗೆ ಹೊಸ ಹೊಸ ಒಳನೋಟಗಳನ್ನು ಕಂಡರಿಸಿದ್ದಾರೆ. ಸ್ಥಳೀಯ ಸಂಸ್ಕೃತಿ, ಕೃಷಿ ಭಾಷೆಗೆ ಹೆಚ್ಚು ಒತ್ತು ನೀಡಿದ್ದಾರೆ. ಇವರ ಕಥಾಸಾಹಿತ್ಯದ ಪ್ರತಿಯೊಂದು ಪಾತ್ರದ ಹಿಂದೆ ನಿರೂಪಕ ಇರುತ್ತಾನೆ. ಪ್ರಕೃತಿಯ ಗಟ್ಟಿತನ ಮತ್ತು ಸೂಕ್ಷ್ಮತೆಯನ್ನು ಸೂಕ್ಷ್ಮವಾಗಿ ಗಮನಿಸಿ ಸಮಗ್ರತೆಯನ್ನು ಕಟ್ಟಿಕೊಡುತ್ತಾರೆ. ಆನರು ದಿನನಿತ್ಯ ಮಾತಾಡುವ ಭಾಷೆಯನ್ನೇ ಅವರು ಕಥೆ – ಕಾದಂಬರಿಯಲ್ಲಿ ತಂದಿದ್ದಾರೆ. ಕೆಲವೊಮ್ಮೆ ಇವರ ಕೃತಿಗಳಲ್ಲಿ ಕೊನೆ ಎಂಬುದೇ ಇಲ್ಲ. ಅವು ಮುಂದುವರಿಯುತ್ತಲೇ ಇರುತ್ತವೆ. ಉದಾಹರಣೆಗೆ 'ಕಿರಗೂರಿನ ಗಯ್ಯಾಳಿಗಳು' ಕತೆಯನ್ನು ನೋಡಬಹುದು.

ಮನುಷ್ಯರ ನಿಗೂಢತೆಯನ್ನು ಕೆಳಸ್ತರದ ಲಘುಹಾಸ್ಯದ ಮೂಲಕ ಬೆರಗಿನಲ್ಲಿ ಒಂದು ಸೃಷ್ಟಿಶೀಲತೆಯನ್ನು ಕಟ್ಟಿಕೊಟ್ಟಿದ್ದಾರೆ, ತೇಜಸ್ವಿ ಸಾಹಿತಿಯಾಗಿ ಪರಿಸರವನ್ನು ಚೆನ್ನಾಗಿ ಅರ್ಥ ಮಾಡಿಕೊಂಡಿದ್ದವರಾಗಿದ್ದು ಅದಮ್ಯ ಕುತೂಹಲ ಹೊಂದಿದವರಾಗಿದ್ದರು. ಇವರ ಕೃತಿಗಳಲ್ಲಿ ಪರಿಸರ ಪ್ರೇಮ, ಸ್ನೇಹಪರ ಗುಣ, ಮಾನವೀಯ ಕಳಕಳಿಯನ್ನು ಕಾಣಬಹುದು. ಕೊಂಚೆ ಕಾಡು ಮನುಷ್ಯರಂತೆ, ಒರಟರಂತೆ ಕಾಣುತ್ತಿದ್ದ ತೇಜಸ್ವಿಯವರ ಕೃತಿಯಲ್ಲಿ ಶಿಸ್ತು, ಕ್ರಮಬದ್ಧತೆ ವಿನೋದಮಯತೆ, ವಿಜ್ಞಾನಿಯ ಖಚಿತತೆ, ಪ್ರಕೃತಿ ಪ್ರೇಮ, ಏಕಾಗ್ರತೆಯನ್ನು ಕಾಣಬಹುದು. ಸಾಹಿತಿಯಾದವನು ತನ್ನ ಅನುಭವಗಳನ್ನು ಹೇಳಿಕೊಳ್ಳಲು ತತ್ವಶಾಸ್ತ್ರ, ಪುರಾಣ, ಮನಃಶಾಸ್ತ್ರಗಳನ್ನು ಬಳಸಿಕೊಳ್ಳುವಂತೆ ತೇಜಸ್ವಿ ತಮ್ಮ ಕಥಾಸಾಹಿತ್ಯದಲ್ಲಿ ಕೀಟಶಾಸ್ತ್ರ, ಪಕ್ಷಿಶಾಸ್ತ್ರ, ಪ್ರಾಣಿಶಾಸ್ತ್ರಗಳನ್ನು ಬಳಸಿಕೊಂಡಿದ್ದಾರೆ.

ಜೀವನವನ್ನು ತನ್ನ ಸುತ್ತಲಿನ ಬದುಕನ್ನು ಬಹಳ ಸೂಕ್ಷ್ಮವಾಗಿ ನೋಡುತ್ತಿದ್ದ ತೇಜಸ್ವಿ ಪುನರ್ಜನ್ಮ, ಜ್ಯೋತಿಷ್ಯ, ಮೂಢನಂಬಿಕೆಯ ಆಚರಣೆಗಳ ವಿರುದ್ಧ ಸಾಮಾಜಿಕ ಎಚ್ಚರವನ್ನು ರೂಪಿಸಲು ಸಾಹಿತ್ಯವನ್ನು ಸಮರ್ಥವಾಗಿ ಬಳಸಿದ ಲೇಖಕರು ವಿರಳ, ಅಂತಹವರಲ್ಲಿ ತೇಜಸ್ವಿ ಅವರು ಗಮನಾರ್ಹರು.

ತಮ್ಮ ಬರವಣಿಗೆಯಲ್ಲಿ ನಿಸರ್ಗ ನಿಗೂಢತೆಯ ಬಗೆಗೆ ಸಂಶೋಧನೆ ಮಾಡಿರುವ, ಮಾನವ ಶಾಸ್ತ್ರ, ಇತಿಹಾಸ, ರಾಜಕೀಯ ಮುಂತಾದ ಜ್ಞಾನಶಾಖೆಗಲ ತಿಳುವಳಿಕೆಯನ್ನು ಹೊಂದಿರುವ ತೇಜಸ್ವಿಯವರು ತಮ್ಮ ಕೃತಿಗಳಲ್ಲಿ, ಪ್ರದರ್ಶಿಸಿರುವ ಸಂಶೋಧಕನ ಸೂಕ್ಷ್ಮದೃಷ್ಟಿ, ವೀಕ್ಷಣಾಶಕ್ತಿ ಮತ್ತು ತಾರ್ಕಿಕ ಚಿಂತನೆಯು ಅನ್ಯಾದೃಶವಾದುದು ಅವರ ಕೃತಿಗಳಾದ ಕರ್ವಾಲೋ, ಚಿದಂಬರ ರಹಸ್ಯಗಳಲ್ಲಿ ಈ ಅಂಶಗಳು ಎದ್ದು ಕಾಣುತ್ತವೆ.

ನಾವೆಲ್ಲರು ಎಂದೋ ಅನುಭವಿಸಿದ್ದ ಪ್ರಸಂಗಗಳೇ ತೇಜಸ್ವಿಯ ಕೈಗೆ ಸಿಕ್ಕಿ ಅಪರೂಪದ ಕತೆಯೇ, ಕಾದಂಬರಿಯೋ ಆಗಿವೆ ಎಂಬಂತೆ ಅವರ ಕಥಾಸಾಹಿತ್ಯ ಓದಿದವರಿಗೆ ತಿಳಿಯುತ್ತದೆ. ಉಳಿದ ಎಲ್ಲ ಲೇಖಕರಿಗಿಂತ ಹೆಚ್ಚು ತೀವ್ರವಾಗಿ ಎಲ್ಲಾ ವರ್ಗದ ಓದುಗರನ್ನು ತೇಜಸ್ವಿಯವರು ತಲುಪಲು ಸಾಧ್ಯವಾದುದಕ್ಕೆ ಅವರ ನವಿರು ಭಾಷಾ ಬಳಕೆಯೇ ಮುಖ್ಯ ಕಾರಣವಾಗಿತ್ತು. ಈ ಕಾರಣದಿಂದಲೇ ಕುವೆಂಪುರವರನ್ನು ಟೀಕಿಸುವ ಒಂದು ವರ್ಗವಿದೆ, ಆದರೆ ತೇಜಸ್ವಿಯವರನ್ನು ಟೀಕಿಸುವ ಒಂದು ವರ್ಗವಿಲ್ಲ, ಹೀಗೆ ತೇಜಸ್ವಿ ಅವರ ಕಥಾಸಾಹಿತ್ಯದಲ್ಲಿ ಪ್ರಕೃತಿ ಚಿತ್ರಣವನ್ನು ಕಾಣಬಹುದು.

# ಆಕರ ಗ್ರಂಥಗಳು


1) ಪೂರ್ಣಚಂದ್ರ ತೇಜಸ್ವಿ ಕೆ.ಪಿ – ಅಬಚೂರಿನ ಪೋಸ್ಟಾಫೀಸು ಪುಸ್ತಕಪ್ರಕಾಶನ, ಸರಸ್ವತಿಪುರಂ, ಮೈಸೂರು–09, 2007

2) ಪೂರ್ಣಚಂದ್ರ ತೇಜಸ್ವಿ ಕೆ.ಪಿ – ಏರೋಪ್ಲೇನ್ ಚಿಟ್ಟೆ ಮತ್ತು ಇತರ ಕಥೆಗಳು, ಪುಸ್ತಕಪ್ರಕಾಶನ, ಸರಸ್ವತಿಪುರಂ, ಮೈಸೂರು–09, 2006

3) ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಕರ್ವಾಲೊ ಪುಸ್ತಕಪ್ರಕಾಶನ, ಸರಸ್ವತಿಪುರಂ, ಮೈಸೂರು–09, 2007

4) ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಕಿರಗೂರಿನ ಗಯ್ಯಾಳಿಗಳು ಪುಸ್ತಕಪ್ರಕಾಶನ, ಸರಸ್ವತಿಪುರಂ, ಮೈಸೂರು–09, 2006

5) ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಚಿದಂಬರ ರಹಸ್ಯ ಪುಸ್ತಕಪ್ರಕಾಶನ, ಸರಸ್ವತಿಪುರಂ, ಮೈಸೂರು–09, 2006

6) ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಜುಗಾರಿಕ್ರಾಸ್ ಪುಸ್ತಕಪ್ರಕಾಶನ, ಸರಸ್ವತಿಪುರಂ, ಮೈಸೂರು–09, 2006

7) ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಪರಿಸರದ ಕತೆ
ಪುಸ್ತಕಪ್ರಕಾಶನ,
ಸರಸ್ವತಿಪುರಂ,
ಮೈಸೂರು–09, 2008

8) ಪೂರ್ಣಚಂದ್ರ ತೇಜಸ್ವಿ ಕೆ.ಪಿ. – ಮಾಯಾಲೋಕ–1
ಪುಸ್ತಕಪ್ರಕಾಶನ,
ಸರಸ್ವತಿಪುರಂ,
ಮೈಸೂರು–09, 2008

9) ಪೂರ್ಣಚಂದ್ರ ತೇಜಸ್ವಿ ಕೆ.ಪಿ – ವ್ಯಕ್ತಿ ವಿಶಿಷ್ಟ ಸಿದ್ದಾಂತ
ಪುಸ್ತಕಪ್ರಕಾಶನ,
ಸರಸ್ವತಿಪುರಂ,
ಮೈಸೂರು–09, 2008

10) ಪೂರ್ಣಚಂದ್ರ ತೇಜಸ್ವಿ ಕೆ.ಪಿ – ಹುಲಿಯೂರಿನ ಸರಹದ್ದು,
ಪುಸ್ತಕಪ್ರಕಾಶನ,
ಸರಸ್ವತಿಪುರಂ,
ಮೈಸೂರು–09, 2007

# ಪರಾಮರ್ಶನ ಗ್ರಂಥಗಳು

## ಕನ್ನಡ ಕೃತಿಗಳು ಮತ್ತು ಲೇಖನಗಳು


1) ಅಮೂರ ಜಿ.ಎಸ್. – ಕನ್ನಡ ಕಥನ ಸಾಹಿತ್ಯ : ಕಾದಂಬರಿ, 2006

2) ಅಶೋಕ ಟಿ.ಪಿ. – ತೇಜಸ್ವಿ ಕಥನ ಅಕ್ಷರ ಪ್ರಕಾಶನ, ಹೆಗ್ಗೋಡು, ಸಾಗರ, ಕರ್ನಾಟಕ – 17, 2004

3) ಕರೀಗೌಡ ಬೀಚನಹಳ್ಳಿ – ತೇಜಸ್ವಿ ಕಥೆಗಳ ಕುರಿತು ಪ್ರಸಾರಾಂಗ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ವಿದ್ಯಾರಣ್ಯ, 1998

4) ಚಂದ್ರೇಗೌಡ.ಬಿ. ರಾಜು.ಬಿ. 2007 – ತೇಜಸ್ವಿ ನೆನಪು (ಸಂಗ್ರಹ ಲೇಖನಗಳು)

5) ಪ್ರಹ್ಲಾದ್ ಡಿ.ವಿ. – ಸಂಚಯ (ಸಾಂಸ್ಕೃತಿಕ ಪತ್ರಿಕೆ) ಪೂರ್ಣಚಂದ್ರ ತೇಜಸ್ವಿ, ವಿಶೇಷ ಸಂಚಿಕೆ, ಬನಶಂಕರಿ, ಬೆಂಗಳೂರು–85, 2002

6) ಪ್ರಹ್ಲಾದ್ ಡಿ.ವಿ. – ತೇಜಸ್ವಿಲೋಕ ಇಳಾ ಮುದ್ರಣ, ಬೆಂಗಳೂರು–26, 2007.

7) ಬೈರೇಗೌಡ ಎಂ. ಸತ್ಯನಾರಾಯಣ ಬಿ.ಆರ್. – ತೇಜಸ್ವಿ ಕೆ.ಎಸ್.ಮುದ್ದಪ್ಪ ಸ್ಮಾರಕ ಟ್ರಸ್ಟ್, ಬೆಂಗಳೂರು–40, 2006

8) ಮಹೇಶ್ವರಯ್ಯ ಹೆಚ್.ಎಂ. – ಪೂರ್ಣಚಂದ್ರ ತೇಜಸ್ವಿ
ನವಕರ್ನಾಟಕ ಪಬ್ಲಿಕೇಷನ್ಸ್
ಬೆಂಗಳೂರು–01, 2008

9) ಮುಳುಕುಂಟೆ ರಮೇಶ್ – ಬಿ.ಜೆ.ಎಲ್.ಸ್ವಾಮಿ
ನವಕರ್ನಾಟಕ ಪಬ್ಲಿಕೇಷನ್ಸ್
ಬೆಂಗಳೂರು–01, 2002

10) ರಾಜಪ್ಪ ದಳವಾಯಿ – ಕನ್ನಡ ಸಾಹಿತ್ಯ ಕೋಶ
ದಳವಾಯಿ ಪ್ರಕಾಶನ
ಬೆಂಗಳೂರು–56, 2008

11) ಲಂಕೇಶ್.ಪಿ. – ಸಾಹಿತಿ, ಸಾಹಿತ್ಯ, ವಿಮರ್ಶೆ
ಲಂಕೇಶ್ ಪ್ರಕಾಶನ, ಬಸವನಗುಡಿ
ಬೆಂಗಳೂರು–04, 2008

12) ವೀರಪ್ಪ ಜಿ.ಟಿ.
ಬೈರೇಗೌಡ.ಎಂ. – ಕರ್ನಾಟಕ ಸಾಹಿತ್ಯ ಅಕಾಡೆಮಿ
ಕನ್ನಡ ಭವನ,
ಬೆಂಗಳೂರು–02, 2004

13) ಶೇಷಗಿರಿರಾವ್ ಎಲ್.ಎಸ್. – ಹೊಸಗನ್ನಡ ಸಾಹಿತ್ಯ ಚರಿತ್ರೆ
ಅಂಕಿತ ಪುಸ್ತಕ, ಬಸವನಗುಡಿ
ಬೆಂಗಳೂರು–04, 2008

14) ಮಯೂರ – ತೇಜಸ್ವಿ ನೆನಪಿನ ಸಂಚಿಕೆ
ದಿ ಪ್ರಿಂಟರ್ಸ್ ಪ್ರೈವೇಟ್ ಲಿಮಿಟೆಡ್
ಬೆಂಗಳೂರು–01, 2007

15) **ನಿಯತಕಾಲಿಕೆಗಳು :**

1) ವಿಜಯ ಕರ್ನಾಟಕ
   ಸಾಪ್ತಾಹಿಕ ವಿಜಯ
   30 ಡಿಸೆಂಬರ್ 2001

2) ವಾರ್ತಾ ಭಾರತಿ
   ಸಾಪ್ತಾಹಿಕ ಭಾರತಿ
   5 ಏಪ್ರಿಲ್ 2009

3) ವಿಜಯ ಕರ್ನಾಟಕ
   ಸಾಪ್ತಾಹಿಕ ವಿಜಯ
   12 ಜುಲೈ 2009

4) ಕನ್ನಡ ಪ್ರಭಾ
   ಸಾಪ್ತಾಹಿಕ ಪ್ರಭಾ
   6 ಏಪ್ರಿಲ್ 2007

5) ಸ್ಪರ್ಧಾಸ್ಫೂರ್ತಿ
   ಮೇ 2007

